

# ಸಪ್ತಗಿರಿ

ಸೆಪ್ಟಂಬರ್, 1993

ಬೆಲೆ : ರೂ. 2/-

JAGADISH

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ




ದಾಸದಾಸರ ಮನೆಯ ದಾಸಿಯರ ಮಗ ನಾನು ॥ ಪ ॥

ಸಾಸಿರ ನಾಮದೊಡೆಯ ರಂಗಯ್ಯನ ಮನೆಯ ॥ ಅ.ಪ. ॥

ಶಂಕು ದಾಸರ ಮನೆಯ ಮಂಕುದಾಸನು ನಾನು
ಮಂಕು ದಾಸನು ನಾನು ಮರುಳುದಾಸ
ಸಂಕೀರ್ತನೆಯ ಮಾಡಿ ನೆನೆವ ಭಕ್ತರ ಮನೆಯ
ಬಿಂಕದಿ ಬಾಗಿಲ ಕಾಯ್ವ ಬಡದಾಸ ನಾನಯ್ಯ ॥ ೧ ॥

ಕಾಳಿದಾಸರ ಮನೆಯ ಕೀಳು ದಾಸ ನಾನಯ್ಯ
ಆಳು ದಾಸನು ನಾನು ಮೂಳದಾಸ
ಫಾಲಾಕ್ಷಸಖ ನಿನ್ನ ಭಜಿಪ ಭಕ್ತರ ಮನೆಯ
ಆಳಿನಾಳಿನ ದಾಸನಡಿದಾಸ ನಾನಯ್ಯ ॥ ೨ ॥

ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ
ಕುಲವಿಲ್ಲದ ದಾಸ ಕುರುಬ ದಾಸ
ಛಲದಿ ನಿನ್ನ ಭಜಿಸುವವರ ಮನೆಯ ಮಾದಿಗ ದಾಸ
ಸಲೆ ಮುಕ್ತಿ ಪಾಲಿಸೆನ್ನೊಡೆಯ (ಆದಿ) ಕೇಶವನೆ ॥ ೩ ॥

---ಶ್ರೀ ಕನಕದಾಸರು.

ಸಂದರ್ಶಿಸಿ. ಆನಂದಿಸಿ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

# ತಿರುಮಲೆ



# ಬ್ರಹ್ಮೋತ್ಸವಗಳು

## 15--10--93 ರಿಂದ 23--10--93 ವರೆಗೆ

### ಕಾರ್ಯಕ್ರಮ ವಿವರ

| ದಿನಾಂಕ | ದಿನ | ಬೆಳಗ್ಗೆ | ಸಂಜೆ |
|---|---|---|---|
| 15--10--93 | ಶುಕ್ರವಾರ | ತಿರುಚ್ಚಿ ಉತ್ಸವ | ದೊಡ್ಡ ಶೇಷವಾಹನ. |
| 16--10--93 | ಶನಿವಾರ | ಚಿಕ್ಕ ಶೇಷವಾಹನ | ಹಂಸವಾಹನ. |
| 17--10--93 | ಭಾನುವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ. |
| 18--10--93 | ಸೋಮವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ. |
| 19--10--93 | ಮಂಗಳವಾರ | ಮೋಹಿನೀ ಅವತಾರ | ಗರುಡೋತ್ಸವ. |
| 20--10--93 | ಬುಧವಾರ | ಹನುಮಂತ ವಾಹನ<br>ಸಂಜೆ -- ವಸಂತೋತ್ಸವ | ಗಜವಾಹನ. |
| 21--10--93 | ಗುರುವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 22--10--93 | ಶುಕ್ರವಾರ | ರಜತ ರಥೋತ್ಸವ | ಅಶ್ವವಾಹನ. |
| 23--10--93 | ಶನಿವಾರ | ಅವಭೃಥ ಉತ್ಸವ | ತಿರುಚ್ಚಿ ವಾಹನ. |

ಸೂಚನೆ: ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗುತ್ತವೆ. ಹೆಚ್ಚಿನ ವಿವರಗಳಿಗಾಗಿ ಯಾವುದೇ ತಿ. ತಿ. ದೇವಸ್ಥಾನಗಳ ವಿಚಾರಣಾಕೇಂದ್ರದಲ್ಲೂ ವಿಚಾರಿಸಬಹುದು.

ನೀವೂ ಬನ್ನಿ ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ




ಗೌರವ ಸಂಪಾದಕರು :

ಶ್ರೀ ಡಿ. ವಿ. ಎಲ್. ಎನ್. ಮೂರ್ತಿ, ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ :

ಕೆ. ಸುಬ್ಬಾರಾವು,ಎಂ. ಎಂ.

ಉಪಸಂಪಾದಕ :

ಬಿ. ಎನ್. ಶ್ರೀನಿವಾಸನ್ ಎಂ. ಎ.,

ಮುದ್ರಣ :

ಎಂ. ವಿಜಯಕುಮಾರ್ ರೆಡ್ಡಿ

ಲೇಖನ /ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ

ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ

ದೊರೆಯುವುವು.

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**





**ಸಂಪುಟ - ೨೪ ]　　ಸೆಪ್ಟಂಬರ್ ೧೯೯೩　　[ ಸಂಚಿಕೆ - ೪**


# ವಿಷಯಸೂಚಿ



ಮುಖಚಿತ್ರ: ಗಣಪತಿ -- ಚಿತ್ರ -- ಕೆ. ಜಗದೀಶ್.

ಹಿಂಬದಿಯಲ್ಲಿ: ಅಯನವಿಲ್ಲಿ ವಿಘ್ನೇಶ್ವರಾಲಯ (ಪೂರ್ವಗೋದಾವರಿಜಿಲ್ಲೆ).

ಒಳಗಡೆ: 1. ಸ್ವಾಮಿ ಚಿನ್ಮಯಾನಂದರು.

2. ನವರಾತ್ರಿಯಲ್ಲಿನ ತಿರುಮಲೆಯ ಬ್ರಹ್ಮೋತ್ಸವದ ರಜತರಥೋತ್ಸವ.




ಗುರುವನ್ನು ಹುಡುಕಿಕೊಂಡು ಹೋಗಬೇಕಂತೆ. ಉತ್ತಮ ಗುರು ದೊರೆಯುವುದು ಬಹುಕಷ್ಟ ಎಂಬುದನ್ನು ಅವಧಾರಣಗೊಳಿಸಲು ಹೇಳಿದ ಮಾತು ಇದು. ಶಿಷ್ಯನ ವಿದ್ಯಾಸಕ್ತಿಯಂತೆ ಗುರುವಿನ ಪರಿಣತಿ. ಅಜ್ಞಾನವೇ ಪರಮಧನವಾದಾಗ ಆಸಕ್ತಿ ಮೂಡುವುದಾದರೂ ಎಂತು? ಬಹುಮಂದಿಯ ಬದುಕು ಹೀಗೇ -- ನಮಗೆ ಉತ್ಕರ್ಷದಾಯಕವಾದದ್ದು ಏನು ಎಂಬುದರ ಪರಿವೆಯೇ ಇಲ್ಲದೆ ಸಾಗುವುದು. ಇಂತಲ್ಲಿ ಉತ್ತಮ ಗುರುವನ್ನು ಹುಡುಕುವ ಅಭೀಪ್ಸೆಯಾದರೂ ಎಲ್ಲಿಂದ ಬರಬೇಕು?

ಈ ಸಾಂಸಾರಿಕ ಜಂಜಾಟದ ಮೂಲವಲನ್ನರಿತೇ ಸ್ವಾಮಿ ಚಿನ್ಮಯಾನಂದರು ಬೆಟ್ಟದಿಂದ ಬಯಲಿಗಿಳಿದು ಬಂದರು. ಜ್ಞಾನ ಭಾಗೀರತಿಯನ್ನು ಜನಮನತನುವನ್ನು ತೊಳೆಯಲು ತಂದರು. ಜ್ಞಾನಕಾಂಕ್ಷೆಯನ್ನು ಕಾಂತಿಯನ್ನು ಪ್ರಸರಿಸಲು ವ್ರತನಿಷ್ಠರಾಗಿ ಜೀವನದುದ್ದಕ್ಕೆ ತಾವು ನಡೆದದ್ದೇ ಅಲ್ಲದೆ ಜ್ಞಾನ ದೀಪಧಾರಿಗಳ ಪಡೆಯನ್ನೇ ತರಬೇತಿಗೊಳಿಸಿ ಜ್ಞಾನಯಜ್ಞದ ಬೆಳಕು ಹರಿಸಿದರು.

ಕೇರಳದೊಂದು ಮೂಲೆಯಲ್ಲಿ ಹುಟ್ಟಿದ ಬಾಲಕೃಷ್ಣಮೆನನ್ ಪೂರ್ವನಾಮ ಆಶ್ರಮದ ಸ್ವಾಮಿಜಿ ಆಂಗ್ಲರ ಕಾಲದಲ್ಲೇ ಆಂಗ್ಲಭಾಷೆಯ ಸ್ನಾತಕೋತ್ತರ ಪದವಿ ಪಡೆದವರು. ಪತ್ರಕರ್ತರಾಗಿ ಸಾಮಾನ್ಯ ಬದುಕು ಮಾಡುವುದರಲ್ಲಿ ಸ್ವಾರಸ್ಯವಿಲ್ಲವೆಂದು ಅದರಲ್ಲಿ ವಿರಕ್ತರಾದವರು. ಬದುಕಿನ ಒಳಮರ್ಮವನ್ನೇ ತಿಳಿಯುವ ಪ್ರಯತ್ನದಲ್ಲಿ ಹಿಮಾಲಯವನ್ನೇರಿದರು. ಸ್ವಾಮಿ ಶಿವಾನಂದ, ಸ್ವಾಮಿ ತಪೋವನರಲ್ಲಿ ತಿಳಿವು ಪಡೆದು ಹಿಮಾಲಯವಾದವರು.

ಧರ್ಮದ ಉದ್ದೇಶ ಅಂತರಂಗದ ಪುನರಾವಾಸವೆಂದೂ, ವ್ಯಕ್ತಿತ್ವದ ಪುನರುತ್ಥಾನವೆಂದೂ ಸನಾತನ ಧರ್ಮ ಸತಾರ್ಕಿಕ ನೆಲೆಗಟ್ಟನ್ನು ಹೊಂದಿರುವುದೆಂಬುವನ್ನೂ ವಿವರಿಸಲು -- ನಡುಕಟ್ಟಿ ಯಜ್ಞ ದೀಕ್ಷೆ ವಹಿಸಿದರು. ಶಾಂತಿ ಸಮರಸತೆಗಳ ಸಂದೇಶವನ್ನು ಸಾರುತ್ತಲೇ ನಡೆದ ಹಿರಿಜೀವ.

ಸ್ವಾಮಿ ಚಿನ್ಮಯಾನಂದರದು ಉಪದೇಶದ ದೂರನಿಂತ ಘೋರ್ಗರೆತದ ಮಾರ್ಗವಲ್ಲ, ಸಮೀಪದಲ್ಲಿ ಕುಳಿತು ಮನಗಾಣಿಸುವ ಮಾರ್ಗ. ದೇಹ ಮನವೆಲ್ಲವೂ ಆರೋಗ್ಯಕರವಾಗಿ ಬೆಳೆಯಬೇಕು ಎನ್ನುವ ಮಾರ್ಗ. ಆರೋಗ್ಯಕರ ಅಭಿವೃದ್ಧಿಯ ಮಾರ್ಗದಲ್ಲಿ ನಡೆಯಲೆಂದೇ ಊರೂರುಗಳಲ್ಲೂ, (ಭಾರತದ ಹೊರಗೂ) ನೂರಾರು ಚಿನ್ಮಯ ಮಿಷನ್‌ಗಳು ಗಂಭೀರವಾಗಿ, ಗದ್ದಲವಿಲ್ಲದೆ, ಗರ್ವವಿಲ್ಲದೆ, ಶ್ರೀಸಾಮಾನ್ಯ ಜೀವನವನ್ನು ಅಭ್ಯುತ್ಥಾನದ ಹಾದಿಯಲ್ಲಿ ಕೊಂಡೊಯ್ಯಲು ಪ್ರಯತ್ನಿಸುತ್ತಿವೆ. ಆಯಾ ಪ್ರಾಂತೀಯ ಭಾಷೆಗಳಲ್ಲಿಯೇ ಪ್ರಾಂತೀಯ, ನುಡಿಯ ಸಂಕೋಚಗಳನ್ನು ಮೀರಿ ಮೇಲೇರುವ ಕೆಲಸ ಮಾಡುತ್ತಿವೆ.

ಮೌಢ್ಯದ ವಿರುದ್ಧ ಸ್ವಾಮಿಜೀಯವರಿಗೆ ಅಸಹನೆ--ಧರ್ಮದಲ್ಲಿ, ಆಚಾರದಲ್ಲಿ, ಪರಂಪರೆಯಲ್ಲಿ -- ಎಲ್ಲೂ ಮೂಢನಂಬಿಕೆಗಳನ್ನು ಅವರು ಸಹಿಸಿದವರಲ್ಲ. ಆದರೆ ತಿಳಿಹಾಸ್ಯದಿಂದ, ಸಹಾನುಭೂತಿಯಿಂದ, ಅತೀವ ಮಾನವಾನುಕಂಪದಿಂದ ಅದನ್ನು ನಿವಾರಿಸಲು ಪ್ರಯತ್ನಿಸಿದ ಅವರು ರಿಲಿಜನ್ ವಿತ್ ರೀಸನ್ (ಸಕಾರಣವಾದ ಧರ್ಮ) ಎಂಬ ತತ್ವವನ್ನೆತ್ತಿ ಹಿಡಿದವರು. ಎಂತಲೇ ಭಗವದ್ಗೀತೆಗೆ, ಉಪನಿಷತ್ತುಗಳಿಗೆ ಅವರಲ್ಲಿ ಹೆಚ್ಚಿನ ಪ್ರಾಮುಖ್ಯ ದೊರೆಯಿತು. ಗೀತೆ ಸನಾತನ ಧರ್ಮದ, ಭಾರತದ ಧರ್ಮಗ್ರಂಥ ಮಾತ್ರವೇ ಅಲ್ಲ ಅದು ಇಡೀ ಮಾನವ ಜನಾಂಗಕ್ಕೇ ಭಾರತದ ಭಗವಂತನ ಕಾಣಿಕೆ --ಎಂಬುದನ್ನು ಸಕಾರಣವಾಗಿ ವಿವರಿಸಿದರು.

ಅಂತಹ ಮಹಾನ್ ಚೇತನ ಇಂದು ನಮ್ಮ ಚರ್ಮಚಕ್ಷುಪಟಲದಲ್ಲಿಲ್ಲ. ಅವರ ಮಾತು, ಕೃತಿ ನಮ್ಮ ಅಂತರಂಗದ ಅಕ್ಷಿಪಟಲದಲ್ಲಿದೆ. ಅದನ್ನು ನಾವು ಬಳಸಿಕೊಂಡು ಬದುಕನ್ನು ಸುಗಮಗೊಳಿಸಿಕೊಂಡು ಮುಂದಿನ ತಲೆಮಾರುಗಳಿಗೆ ಕಾಪಿಟ್ಟುಕೊಡುವುದು ಅವರ ನೆನಪಿಗೆ ನಾವು ಮಾಡುವ ನಮನವಾದೀತು.

ಕರುಣಾಳು ಬಾ ಬೆಳಕೆ  
ಮುಸುಕಿದೀ ಮಬ್ಬಿನಲಿ ಕೈಹಿಡಿದು ನಡೆಸೆನ್ನನು

* * * * *

"ವಕ್ರತುಂಡ ಮಹಾಕಾಯ
ಸೂರ್ಯಕೋಟಿ ಸಮಪ್ರಭ
ನಿರ್ವಿಘ್ನಂ ಕುರುಮೇ ದೇವ
ಸರ್ವಕಾರ್ಯೇಷು ಸರ್ವದಾ"

ಎಂದಾಗಲಿ,

"ಗಜಾನನಂ ಭೂತಗಣಾಧಿಸೇವಿತಂ
ಕಪಿತ್ಥಜಂಬೂಫಲ ಸಾರಭಕ್ಷಿತಂ"

ಎಂದಾಗಲಿ,

"ಗಣಾನಾಂ ತ್ವಾಂ ಗಣಪತಿಂ
ಹವಾಮಹೇ ಕವಿಂ ಕವೀನಾಂ"

ಎಂದಾಗಲಿ,

"ಪ್ರಣಮ್ಯ ಶಿರಸಾ ದೇವಂ
ಗೌರೀಪುತ್ರಂ ವಿನಾಯಕಂ
ಭಕ್ತಾವಾಸಂ ಸ್ಮರೇನ್ನಿತ್ಯಂ
ಆಯುಃ ಕಾಮಾರ್ಥ ಸಿದ್ಧಯೇ"

ಎಂದಾಗಲಿ, ಸ್ತೋತ್ರಮಾಡಿ, ಪೂಜಿಸಿ ಗಣಪತಿಯಲ್ಲಿ ವರವನ್ನೂ ಬೇಡುತ್ತಾರೆ. ಆತ ನಮ್ಮ ಕಾಮಾರ್ಥಗಳನ್ನು ಪೂರೈಸುತ್ತಾನೆ. ನಮಗೆ ಸಿದ್ಧಿಯನ್ನು ನೀಡುತ್ತಾನೆ. ಆತ ವಿಘ್ನಕರ್ತನೂ ಹೌದು, ವಿಘ್ನಹರ್ತನೂ ಹೌದು. ವಿಘ್ನಗಳನ್ನು ಒಡ್ಡಿ, ನಮ್ಮ ಭಕ್ತಿಗೆ ಸಂತುಷ್ಟನಾಗಿ, ಅವೇ ವಿಘ್ನಗಳನ್ನು ಅಪಹರಿಸುತ್ತಾನೆ.

ಗಣಪತಿಯಲ್ಲಿ ಅನೇಕ ಗುಣಗಳು ಬೆಳಗುತ್ತವೆ. ಆತ ವಿದ್ಯಾಧಿಪತಿ. ಅಂತೆಯೇ ಪ್ರತಿವರ್ಷ ನಾವು ಗಣಪತಿಯ ಆರಾಧನೆಯನ್ನು ಮಾಡಿ, 'ನಮಗೆ ವಿದ್ಯೆ -- ಬುದ್ಧಿಗಳನ್ನು ದಯಾಪಾಲಿಸು' ಎಂದು ಬೇಡಿಕೊಳ್ಳುತ್ತೇವೆ. ವೇದಕಾಲದಿಂದಲೂ ಗಣಪತಿಯು ಋಷಿಗಳಿಂದ ಪೂಜೆಗೊಳ್ಳುತ್ತ ಬಂದಿದ್ದಾನೆ. ಆತನು ಗಣನಾಯಕ. ಆದರ್ಶನಾಯಕರಲ್ಲಿರಬೇಕಾದ ಗುಣಗಳೆಲ್ಲವೂ ಆತನಲ್ಲಿದೆ. ಗಣಪತಿಯು ದೂರದೃಷ್ಟಿಯುಳ್ಳವನು, ನೀತಿ ನಿಪುಣನು, ಚತುರ ಮತ್ತು ಮುತ್ಸದ್ದಿತನವುಳ್ಳವನು. ಆತನ ಬುದ್ಧಿ ಚಾತುರ್ಯಕ್ಕೆ ಒಂದು ಕಥೆಯನ್ನು ಹೇಳುತ್ತಾರೆ. ಗಣಪತಿಗೂ, ಷಣ್ಮುಖನಿಗೂ ಒಮ್ಮೆ ಸ್ಪರ್ಧೆ ಬಿತ್ತು. ಯಾರು ಬೇಗನೆ ಪೃಥ್ವಿ ಪ್ರದಕ್ಷಿಣೆಯನ್ನು ಪೂರೈಸಬಲ್ಲರು? ಎಂದು. ಶಿವ -- ಪಾರ್ವತಿಯರ ಸಮ್ಮುಖದಲ್ಲಿ ಈ ಸ್ಪರ್ಧೆ ಏರ್ಪಟ್ಟಿತ್ತು. ಷಣ್ಮುಖನು, ತನ್ನ ಪ್ರದಕ್ಷಿಣೆಯನ್ನು ಪೂರೈಸಲಿಕ್ಕೆ ಬಂದಿದ್ದರೂ, ಗಣಪತಿಯು ಇನ್ನೂ ಸ್ವಸ್ಥವಾಗಿರುವುದನ್ನು ಕಂಡು ಶಿವಪಾರ್ವತಿಯರು ಅಚ್ಚರಿಗೊಳಗಾದಾಗ, ಗಣಪ

# ಗಜಾನನೋತ್ಸವ

---ಸಾಲೀಮಠ ದೊಡ್ಡಯ್ಯಶಾಸ್ತ್ರಿ

ತಿಯು ನಿರಾಯಾಸದಿಂದ ತಂದೆತಾಯಿಗಳಿಗೆ ಬಲಗೊಂಡು ನಮಸ್ಕಾರ ಮಾಡಿದನು. 'ತಂದೆ--ತಾಯಿಗಳನ್ನು ಪ್ರದಕ್ಷಿಣೆ ಮಾಡಿದರೆ ಪೃಥ್ವಿಪ್ರದಕ್ಷಿಣೆಯ ಪುಣ್ಯಲಭಿಸುತ್ತದೆ' ಎಂದು ಗಣಪತಿಯು ಆಧಾರವನ್ನು ಹೇಳಿದಾಗ, ತಂದೆತಾಯಿಗಳು ಆತನ ಚತುರತನಕ್ಕೆ ತಲೆದೂಗಿದರಂತೆ. ಈ ಬುದ್ಧಿ ಚಾತುರ್ಯದಿಂದಲೇ ಗಣಪತಿಯು ಗಣನಾಯಕನಾಗಿ ಮೆರೆದನು.

ಗಣಪತಿಯ ಶಿಲ್ಪಸಂಕೇತವೇ ವೈಶಿಷ್ಟ್ಯಪೂರ್ಣವಾಗಿದೆ. ಆತನ ಸೂಕ್ಷ್ಮಕಣ್ಣುಗಳು ನಿರೀಕ್ಷಣ ಬುದ್ಧಿಯನ್ನು, ದೂರದರ್ಶಿತ್ವವನ್ನು ವ್ಯಕ್ತಪಡಿಸುತ್ತವೆ. ಆತನ ಉದ್ದವಾದ ಮೂಗು ಎಲ್ಲೆಲ್ಲಿ ಏನು ವಾಸನೆಯೋ ಅದನ್ನು ಗುರುತಿಸುವ ಸಾಮರ್ಥ್ಯವುಳ್ಳದ್ದು. ಆತ ಮೂಷಿಕವಾಹನ, ಮೂಷಿಕವು ಚಂಚಲತೆಯ ಸಂಕೇತ. ಈ ಚಂಚಲತೆಯನ್ನು ಮಟ್ಟಿ ನಿಂತಿರುವನೆಂದು ಗಣಪತಿಮೂಷಿಕವಾಹನ. ಆತ ಕಹಿಯನ್ನು, ವಿಷವನ್ನೂ ಸಂಕೇತಿಸುವ ಹಾವನ್ನೇ ತನ್ನ ಸೊಂಟಕ್ಕೆ ಸುತ್ತಿರುವುದರಿಂದ ಸರ್ವವೈರವನ್ನೂ, ಅಹಿತವನ್ನೂ, ಕಹಿಯನ್ನೂ ಗೆದ್ದವನು ಎಂದರ್ಥ.

ಗಣಪತಿಯ ಬಗ್ಗೆ ಅನೇಕ ಪೌರಾಣಿಕ ಕಥೆಗಳು ಪ್ರಚಲಿತವಾಗಿವೆ. ಪಾರ್ವತಿಯು ತನ್ನ ಮೈಯ ಮಣ್ಣಿನಿಂದ ಮೂರ್ತಿಯನ್ನು ಮಾಡಲು, ಅದು ಆನೆಯ ಆಕಾರದ್ದಾಗಲು ಅದನ್ನು ಗಂಗೆಯಲ್ಲಿ ವಿಸರ್ಜಿಸಿಬಿಟ್ಟಳು. ಗಂಗೆಯು ಆತನನ್ನು ವಾತ್ಸಲ್ಯದಿಂದ 'ಮಗನೇ' ಎಂದು ಸಂಬೋಧಿಸಿದಾಗ ಆ ಮೂರ್ತಿಗೆ ಜೀವಕಳೆ ಬಂದಿತು. ಹೀಗೆ ಗಣಪತಿಯು ದ್ವೈಮಾತುರನಾಗಿ ಬೆಳೆದನೆಂದು ಮತ್ಸ್ಯಪುರಾಣದಲ್ಲಿ ಹೇಳಿದೆ. ಪಾರ್ವತಿಯು ಮೈತೊಳೆಯುತ್ತಿದ್ದಾಗ, ಗಣಪತಿಯು ಬಾಗಿಲನ್ನು ಕಾಯುತ್ತಿದ್ದ ಶಿವನನ್ನು ಒಳಗೆ ಬಿಡದಿರಲು, ಅವನು ಆ



## ಕೊಡೆಗಳ ನೀಡಿಕೆ ಯೋಜನೆ

ವಿವಿಧ ದೇವಾಲಯಗಳಿಗೆ ಉತ್ಸವಾದಿಗಳಲ್ಲಿ ಬಳಸಲು ಆಲಯೋಪಯೋಗಿ ಕೊಡೆಗಳನ್ನು (ಶ್ವೇತ ಛತ್ರಗಳು) ರಿಯಾಯಿತಿ ದರಗಳಲ್ಲಿ ನೀಡಲು ತೀರ್ಮಾನಿಸಲಾಗಿದ್ದು, ಈ ಯೋಜನೆಯಂತೆ ವಿವಿಧ ದೇವಾಲಯಗಳವರು ಕೊಡೆಗಳಿಗಾಗಿ 50 ಶತಾಂಶ ರಿಯಾಯಿತಿಯ ಹಣ ರೂ. 1000/- ವನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಬ್ಯಾಂಕ್ ಡಿ.ಡಿ.ಯ ರೂಪದಲ್ಲಿ ಕಳುಹಿಸುತ್ತ ಆಯಾ ಜಿಲ್ಲೆಗಳ ಅಸಿಸ್ಟೆಂಟ್ ದೇವಾದಾಯ (ಮುಜರಾಯಿ) ಕಮಿಷನರ್ ಮೂಲಕವಾಗಿ ತಮ್ಮ ಅಭ್ಯರ್ಥನೆಗಳನ್ನು ಕಳುಹಿಸಿದಲ್ಲಿ ಮಾತ್ರವೇ ನೀಡಲಾಗುವುದು. ಕೊಡೆಗಳನ್ನು ತಿರುಪತಿಯಿಂದ ಆಯಾ ದೇವಾಲಯಗಳವರೇ ಕೊಂಡೊಯ್ಯಬೇಕಾಗುವುದು.

ವಿವರಗಳಿಗಾಗಿ ಬರೆಯಿರಿ:---ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇ. ತಿರುಪತಿ.

## ಧ್ವನಿವರ್ಧಕ ವಿತರಣಾಯೋಜನೆ

ವಿವಿಧ ಹಿಂದೂ ದೇವಾಲಯಗಳಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಪ್ರಸಾರಕ್ಕಾಗಿ ತಿ. ತಿ.ದೇ. ಗಳ ವತಿಯಿಂದ ಧ್ವನಿವರ್ಧಕಗಳನ್ನು ರಿಯಾಯಿತಿ ದರದಲ್ಲಿ ನೀಡುವ ಯೋಜನೆಯಿದೆ. 50 ಶತಾಂಶ ರಿಯಾಯಿತಿಯಲ್ಲಿ ನೀಡಲಾಗುವ ಧ್ವನಿವರ್ಧಕಗಳಿಗಾಗಿ ದೇವಾಲಯಗಳವರು ನೀಡಬೇಕಾದ ಮೊತ್ತ ರೂ. 3370/- ಈ ಹಣಕ್ಕೆ ಬ್ಯಾಂಕ್ ಡಿ.ಡಿ.ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಪಡೆದು ಆಯಾ ಜಿಲ್ಲೆಯ ಅಸಿಸ್ಟೆಂಟ್ ಮುಜರಾಯಿ ಕಮಿಷನರ್ ಅವರ ಮೂಲಕ ತಮ್ಮ ಅರ್ಜಿಗಳನ್ನು ಕಳುಹಿಸಬಹುದು.

ವಿವರಗಳಿಗಾಗಿ ಬರೆಯಿರಿ :

**---ಕಾರ್ಯನಿರ್ವಹಣಾಧಿಕಾರಿ,**

ತಿ.ತಿ.ದೇ. ತಿರುಪತಿ.

ಮಗುವಿನ ತಲೆಯನ್ನು ಕತ್ತರಿಸಿದ. ಮುಂದೆ ಪಾರ್ವತಿಯನ್ನು ಸಾಮಾಧಾನ ಪಡಿಸಲೆಂದು ಒಂದು ಆನೆಯ ತಲೆಯನ್ನು ತಂದು ಹಚ್ಚಿದನೆಂದು 'ಸ್ಕಾಂದ ಬ್ರಹ್ಮಖಂಡ'ದಲ್ಲಿ ಹೇಳಿದೆ. ಹೀಗೆ ವಿವಿಧ ರೀತಿಯಲ್ಲಿ ಗಣಪತಿಯ ಬಗ್ಗೆ ಕಥೆಗಳಿವೆ.

ಗಣಪತಿಯನ್ನು ಸರ್ವಮಂಗಲ ಕಾರ್ಯಗಳ ಪ್ರಾರಂಭದಲ್ಲಿ ಪ್ರಾರ್ಥಿಸುವುದುಂಟು. ಕವಿಕುಮಾರವ್ಯಾಸನು ತನ್ನ ಗದುಗಿನ ಭಾರತದಲ್ಲಿ ಗಣಪತಿಯನ್ನು ಹೀಗೆ ಸ್ತುತಿಸಿದ್ದಾನೆ:

"ಗಜಮುಖನೆ ಮೆರೆವೇಕದಂತನೆ
ನಿಜಗುಣಾನ್ವಿತ ಪರಶುಧಾರನೆ
ರಜತಗಿರಿ ಗೊಡೆಯನ ಕುಮಾರನೆ
ವಿದ್ಯೆ ವಾರಿಧಿಯೆ
ಅಜನುಹರಿರುದ್ರಾದಿಗಳು ನೆರೆ
ಭಜಿಸುತಿಹರನವರತ ನಿನ್ನನು
ತ್ರಿಜಗವಂದಿತ ಗಣಪಮಾಳ್ಪುದು
ಮತಿಗೆ ಮಂಗಳವ"

ಗಣಪತಿಯು ವ್ಯಾಸಮಹರ್ಷಿಗಳಿಗೆ ಲಿಪಿಕಾರನಾಗಿ, ಮಹಾಭಾರತವನ್ನು ಬರೆಯಲು ಸಹಾಯ ಮಾಡಿದನಂತೆ. ಈತನ ಶೀಘ್ರಲಿಪಿಗೆ ವ್ಯಾಸಮಹರ್ಷಿಗಳು ಭಾರತ ಶ್ಲೋಕಗಳನ್ನು ವಿವರಿಸುವುದು ಕಷ್ಟವಾಯಿತು. ಆದುದರಿಂದ ಗಣಪತಿಗೆ ಪ್ರತಿಯೊಂದು ಶ್ಲೋಕವನ್ನು ಅರ್ಥಮಾಡಿಕೊಂಡು ಬರೆಯಬೇಕೆಂದು ಹೇಳಿದರಂತೆ. ಅದರಂತೆ ಗಣಪತಿಯು ಶ್ಲೋಕದ ಅರ್ಥಮಾಡುವುವರಲ್ಲಿ ತಡೆಯುವಷ್ಟು ಕಾಲದಲ್ಲಿ ವ್ಯಾಸರು ಮುಂದಿನ ಶ್ಲೋಕವನ್ನು ಆಲೋಚಿಸುತ್ತಿದ್ದರಂತೆ.

ಗಣಪತಿಯ ಪೂಜೆ ಭಾರತದಲ್ಲಿ ಮಾತ್ರವಲ್ಲ, ಚೀನ, ಜಪಾನ, ಮಲಯಾ, ಜಾವಾ, ಟಿಬೇಟ ಮೊದಲಾದ ರಾಷ್ಟ್ರಗಳಲ್ಲಿಯೂ ನಡೆಯುತ್ತದೆ. ನಮ್ಮಲ್ಲಿ ಗಣಪತಿಯನ್ನು ಭಾದ್ರಪದ ಶುದ್ಧ ಚತುರ್ಥಿಯಂದು ಕೂಡಿಸುತ್ತೇವೆ. ಕೆಲವರು ಅಂದೇ, ಮತ್ತೆ ಕೆಲವರು ೫ ದಿನಗಳಾದ ಮೇಲೆ, ಇನ್ನು ಕೆಲವರು ಹುಣ್ಣಿಮೆಯಂದು ಜಲಸಮರ್ಪಣ ಮಾಡುತ್ತಾರೆ. ಲೋಕಮಾನ್ಯ ತಿಳಕರ ಕಾಲದಿಂದ ಗಜಾನನೋತ್ಸವಕ್ಕೆ ಹೊಸದೊಂದು ಸಾಂಸ್ಕೃತಿಕ ಮೆರುಗು ಬಂತು. ಆಗಿನ ಕಾಲದಲ್ಲಿ ಸ್ವಾತಂತ್ರ್ಯಾಂದೋಲನದ ಸಲುವಾಗಿ ಬ್ರಿಟಿಷರಿಗೆ, ಇದು ರಾಜಕೀಯ ಚಟುವಟಿಕೆಯೆಂದು ತಿಳಿಯಗೊಡದೆ ಜನ ಜಾಗೃತಿಯನ್ನುಂಟುಮಾಡುವುದರ ಸಲುವಾಗಿ ಗಜಾನನೋತ್ಸವದ ನೆಪದಲ್ಲಿ ಉಪನ್ಯಾಸಗಳನ್ನು ಏರ್ಪಡಿಸತೊಡಗಿದರು. ಇದರಿಂದಾಗಿ ಗಜಾನನ ಉತ್ಸವವು ಕರ್ನಾಟಕ, ಮಹಾರಾಷ್ಟ್ರಗಳಲ್ಲಿ ಹೊಸದೊಂದು ಸ್ವರೂಪವನ್ನು ತಾಳಿತು. ಚವತಿಯ ದಿನದಂದು ಎಂದರೆ ಗಣೇಶನು ಸ್ಥಾಪಿತವಾದ ದಿನದಂದು, ಚಂದ್ರನನ್ನು ನೋಡಿದರೆ ಅಪವಾದ ಬರುತ್ತದೆ ಎಂದು ಹೇಳುತ್ತಾರೆ. ಶ್ರೀಕೃಷ್ಣನಿಗೂ ಕೂಡ ಈ ಅಪವಾದ ತಪ್ಪಲಿಲ್ಲವಂತೆ. ಇದರ ಪರಿಹಾರಾರ್ಥವಾಗಿ ಅಂದು 'ಸ್ಯಮಂತಕೋಪಾಖ್ಯಾನವನ್ನು ಶ್ರವಣಮಾಡುತ್ತಾರೆ.

ಗಣಪತಿಯು ಪ್ರಣವಸ್ವರೂಪಿ; ಆತನ ಸೊಂಡಿಲು ಪ್ರಣವದಾಕಾರದಲ್ಲಿಯೇ ಇದೆ. ಆತನ ಲಂಬೋದರವು ಬ್ರಹ್ಮಾಂಡದ ಸಂಕೇತವೆಂದೂ ಹೊಟ್ಟೆಗೆ ಸುತ್ತಿದ ಸರ್ಪವು ಬ್ರಹ್ಮಾಂಡ ಹೊತ್ತಿರುವ ಆದಿಶೇಷನೆಂದೂ ಹೇಳುತ್ತಾರೆ.

ಆತನು ಕೈಯಲ್ಲಿ ಧರಿಸಿರುವ ಅಂಕುಶವು ಮತ್ತು ಪಾಶವು ಸಾಧನೆಯಲ್ಲಿ ಅಡ್ಡಬರುವ ವಿಘ್ನಗಳನ್ನು ಪರಿಹರಿಸುವ ಸಾಧನಗಳು ಎಂದು ಹೇಳುತ್ತಾರೆ. ಗಣೇಶಗೀತೆಯಲ್ಲಿ ಹೇಳಿರುವಂತೆ "ಗಣಪತಿಯು ಶಿವ, ವಿಷ್ಣು, ಶಕ್ತಿ, ಸೂರ್ಯ ಸರ್ವವೂ ತಾನೆ ಆಗಿದ್ದಾನೆ" ಪಂಚಭೂತಗಳು, ತ್ರಿಮೂರ್ತಿಗಳು, ಲೋಕಪಾಲಕರು, ಅಷ್ಟವಸುಗಳು, ಚತುರ್ದಶ ಮನುಗಳು, ಗೋವುಗಳು, ಮುನಿಗಳು, ಅರಣ್ಯದ ಪ್ರಾಣಿಗಳು, ನದಿ ಸಮುದ್ರಗಳು, ಸಿದ್ಧಸಾಧ್ಯರು, ಸ್ವರ್ಗಲೋಕ -- ನಾಗಲೋಕಗಳು ಇವೆಲ್ಲ ಆವಿಷ್ಕಾರಗೊಂಡುದು ಈತನಿಗಾಗಿಯೇ. ಜಗತ್ ಚಕ್ಷುವಾದ ಸೂರ್ಯನಂತೆ ಸಾಕ್ಷಿರೂಪನಾಗಿ, ಯಾವ ಕರ್ಮ ಸಂಬಂಧವೂ ಇಲ್ಲದೆ ನಾಶರಹಿತನಾಗಿ, ಸಂತಸ ಸ್ವರೂಪನಾಗಿ, ಪರಬ್ರಹ್ಮಸ್ವರೂಪನಾಗಿ ರಾರಾಜಿಸುತ್ತಾನೆ.

ಇಂದಿಗೂ ನಮ್ಮ ನಾಡಿನಲ್ಲಿ ಗಜಾನನೋತ್ಸವವನ್ನು ಒಂದು ಸಾಂಸ್ಕೃತಿಕ ಹಬ್ಬವೆಂದು ಆಚರಿಸುತ್ತಾರೆ. ವೈಭವದಿಂದ ಮೆರವಣಿಗೆ ಮಾಡಿ, ಬಾಣ, ಬಿರುಸುಗಳ ಸಡಗರದಿಂದ ಗಣಪತಿಯನ್ನು ಪ್ರತಿಷ್ಠಾಪನೆ ಮಾಡುತ್ತಾನೆ. ಐದುದಿನಗಳು ಅಥವಾ ೧೦ ದಿನಗಳ ವರೆಗೆ ಹೊರಗಿನಿಂದ ವಿದ್ವಾಂಸರನ್ನು ಕರೆಯಿಸಿ ಉಪನ್ಯಾಸಗಳನ್ನು ಏರ್ಪಡಿಸುತ್ತಾರಲ್ಲದೆ, ಸಂಗೀತ ಕಲಾವಿದರನ್ನು ಆಮಂತ್ರಿಸಿ ಸಂಗೀತಕಚೇರಿಗಳನ್ನು ಏರ್ಪಡಿಸುತ್ತಾರೆ. ನಮ್ಮ ಧಾರ್ಮಿಕ ಪರಂಪರೆಗೆ ಹೊಸ ಸಾಂಸ್ಕೃತಿಕ ಮತ್ತು ಸಾಮಾಜಿಕ ತಿರುವು ದೊರೆತುದು ಪ್ರಗತಿಯ ಲಕ್ಷಣವಾಗಿದೆ. ನವರಾತ್ರಿಯು ಕೂಡ ನಾಡಹಬ್ಬದ ಸ್ವರೂಪವನ್ನು ತಾಳಿ, ಇದೇ ಬಗೆಯಾಗಿ ಸಾಂಸ್ಕೃತಿಕ ಹಬ್ಬವೆಂದು ಆಚರಿಸಲ್ಪಡುತ್ತವೆ.



# ಗಣಪತ್ಯಥರ್ವಶೀರ್ಷ

---ಅನಂತ ಚಿಂತಾಮಣಿ ಜ್ಯೋತಿಷೀ.

ಕಲೌ ಚಂಡೀ ವಿನಾಯಕೌ ಎಂಬಂತೆ ಕಲಿಯುಗದಲ್ಲಿ ಗಣಪತಿ ಹಾಗೂ ಚಂಡಿಕಾ ದೇವಿ ಇಬ್ಬರೂ ಸಿದ್ಧಿಪ್ರದ ದೇವತೆಗಳು. ಅದರಲ್ಲಿಯೂ ಗಣಪತಿಯು ಕ್ಷಿಪ್ರ ಪ್ರಸಾದಕನು.

ಗಣಪತಿಯ ವಿವಿಧ ಉಪಾಸನಾ ಪದ್ಧತಿಗಳಲ್ಲಿ ಗಣಪತ್ಯಥರ್ವ ಶೀರ್ಷವು ಅತ್ಯಂತ ತ್ವರಿತವಾಗಿ ಫಲವನ್ನು ತಂದು ಕೊಡುತ್ತದೆ. ಇದು ೧) ಪ್ರಾರಂಭದ ಶಾಂತಿ ಮಂತ್ರ ಓಂ ಭದ್ರಂ ಕರ್ಣೇಭಿಃ.......... ಬೃಹಸ್ಪತಿರ್ದದಾತು, ೨) ಓಂ ನಮಸ್ತೇ ಗಣಪತಯೇ ........ ದಿಂದ ಶಿವಸುತಾಯವರದ ಮೂರ್ತಯೇ ನಮಃ ದ ತನಕ ೧೦ ಮಂತ್ರ ಹಾಗೂ, ೩) ಫಲಶ್ರುತಿ ಏತದಥರ್ವಶೀರ್ಷದಿಂದ ಯ ಏವಂ ವೇದ ತನಕ ೪ ಮಂತ್ರ ಹೀಗೆ ಮೂರು ಭಾಗಗಳನ್ನು ಹೊಂದಿದೆ. ಓಂ ಗಂ ಗಣಪತಯೇ ನಮಃ ಇದು ಗಣಪತಿಯ ಮೂಲ ಉಪಾಸನೆಯ ಸಬೀಜ ಮಂತ್ರವಾಗಿದೆ.

ಅಥರ್ವಶೀರ್ಷ ಎಂದರೆ ಏನು ?

ಅಥರ್ವ ಮತ್ತು ಶೀರ್ಷ ಇವು ಎರಡು ಶಬ್ದಗಳು. ಥರ್ವ ಧಾತುವಿನ ಅರ್ಥ ಚಂಚಲವಾಗು ಅ ಎಂದರೆ ಇಲ್ಲ, ಎಂದರೆ ಚಂಚಲವಾಗದುದು. ಚಂಚಲತೆ ನಾಶ ಮಾಡುವಂತಹುದು. ಅಥರ್ವ ಎಂದರೆ ಸ್ಥಿರತೆ ಎಂಬ ಅರ್ಥ ಇವರ ಮೇಲಿಂದ ಹೊರಡುತ್ತದೆ. ಶೀರ್ಷ ಎಂದರೆ ತಲೆ. ಮನಸ್ಸಿನ ಚಂಚಲತೆಯನ್ನು ಇಲ್ಲವಾಗಿರಿಸಿ ತಲೆಯನ್ನು ಶಾಂತಮಾಡುವ ವಿದ್ಯೆಯೆಂದರೆ ಅಥರ್ವ ಶೀರ್ಷವಾಗಿವೆ. ರಕ್ತದ ಒತ್ತಡವಿರುವ ವ್ಯಕ್ತಿಗೆ ಈ ಸೂಕ್ತ ಪಾಠವು ಸಮುಪಯೋಗವನ್ನು ತಂದುಕೊಡುತ್ತದೆ. ಈ ಅಥರ್ವಶೀರ್ಷವು ಅಥರ್ವ ವೇದದಲ್ಲಿದಲ್ಲಿದ್ದು ಇದೊಂದು ಉಪನಿಷತ್ತೇ ಆಗಿದೆ. ಅಥರ್ವವೇದದಲ್ಲಿ ಬ್ರಹ್ಮವಿದ್ಯೆ, ಆತ್ಮವಿದ್ಯೆ ಮತ್ತು ಆಧ್ಯಾತ್ಮವಿದ್ಯೆ ಇವು ಮುಖ್ಯ ವಿಷಯಗಳಾಗಿವೆ.

ಓಂ ನಮಸ್ತೇ ಗಣಪತಯೇ ಎಂಬ ಒಂದನೆಯ ಮಂತ್ರವು ಗಣಪತಿಯ ಆಧಿದೈವಿಕ ಸ್ವರೂಪವನ್ನು ಹೊಂದಿದೆ. ಎರಡನೆಯ ಮಂತ್ರವು ಸತ್ಯಕಥನವನ್ನು ತಿಳಿಸುತ್ತದೆ. ಮೂರನೆಯ ಮಂತ್ರವು ರಕ್ಷಣೆಗಾಗಿ ಪ್ರಾರ್ಥನೆಯನ್ನು ತಿಳಿಸುತ್ತದೆ. ಗಣಪತಿಯ ಆಧ್ಯಾತ್ಮಿಕ ಸ್ವರೂಪವನ್ನು ನಾಲ್ಕನೆಯ ಮಂತ್ರವು ತಿಳಿಸುತ್ತದೆ. ಗಣಪತಿಯ ವಿಸ್ತೃತ ಸ್ವರೂಪವನ್ನು ಮತ್ತು ಆತನ ವಿಶ್ವರೂಪವನ್ನು ಸರ್ವಂ ಜಗದಿದಂ ಎಂಬ ನಾಲ್ಕನೆಯ ಮಂತ್ರವು ಹೇಳುತ್ತದೆ. ಆರನೆಯ ಮಂತ್ರವು ಕೂಡ ಗಣಪತಿಯ ಓಂಕಾರ ರೂಪಿ ಬ್ರಹ್ಮನ ರೂಪವನ್ನು ತಿಳಿಸುತ್ತ ವಿಶ್ವರೂಪದ ಗಣಪತಿಯನ್ನು ಚಿತ್ರಿಸುತ್ತದೆ. ಏಳನೆಯ ಮಂತ್ರವು ಗಣೇಶವಿದ್ಯೆಯಾಗಿದೆ. ಗಣೇಶ ವಿದ್ಯೆಗೆ ಗಣಪನೆಂಬ ಋಷಿಯಾಗಿದ್ದು ಮಹಾಗಣಪತಿಯ ದೇವತೆಯಾಗಿರುವನು. ಓಂ ಗಂ ಇದು ಮಂತ್ರದ ಸ್ವರೂಪವಾಗಿದ್ದು 'ಗಂ' ಅಕ್ಷರದ ವ್ಯುತ್ಪತ್ತಿಯನ್ನು ತಿಳಿಸುತ್ತದೆ. ಮಂತ್ರದ ಆರಂಭದಲ್ಲಿ ಗಕಾರವು, ಅಕಾರವು ಮಧ್ಯದಲ್ಲಿ, ಅಂತ್ಯದಲ್ಲಿ ಅನುಸ್ವಾರವು, ಅದಾದನಂತರ ಬಿಂದು. ಇವೆಲ್ಲವು ನಾದದಿಂದ ಹೊಂದಿಸಲ್ಪಟ್ಟು ಗಣೇಶವಿದ್ಯೆಯು ಜ್ಞಾನವನ್ನು ಕೊಡುತ್ತದೆ. ಈ ನಾದವು ಏಕತ್ರೋಚ್ಚಾರವಾಗಿರಬೇಕು. ಎಂಟನೆಯ ಮಂತ್ರವು ಗಣೇಶಗಾಯತ್ರಿಯಾಗಿದೆ. ಒಂಬತ್ತನೆಯ ಮಂತ್ರವು ಗಣಪತಿಯ ಧ್ಯಾನವನ್ನು ತಿಳಿಸುತ್ತದೆ. ಹತ್ತನೆಯ ಮಂತ್ರವು ನಮನಸ್ವರೂಪವನ್ನು ಹೇಳುತ್ತದೆ. ಹನ್ನೊಂದರಿಂದ ಹದಿನಾಲ್ಕು ಮಂತ್ರಗಳು ಅಥರ್ವಶೀರ್ಷದಿಂದಾಗುವ ಫಲವನ್ನು ನಿರೂಪಿಸುತ್ತದೆ. ಅಥರ್ವಶೀರ್ಷದ ಆರಂಭದಲ್ಲಿ ಮತ್ತು ಕೊನೆಗೆ ಶಾಂತಿ ಮಂತ್ರವನ್ನು ಪಠಿಸತಕ್ಕದ್ದು. ಸಹನಾವವತು ಎಂಬ ಶಾಂತಿ ಮಂತ್ರವು ಸಮಷ್ಟಿಧೋರಣೆಯನ್ನು ಹೊಂದಿದ್ದು ಗಣಪತ್ಯಥರ್ವಶೀರ್ಷದ ಕೊನೆಗೆ ಪಠಿಸುವ ರೂಢಿಯಿರುತ್ತದೆ.

ಈ ಧ್ಯೇಯಸಾಧನೆಗಾಗಿ ಭದ್ರಂಕರ್ಣೇಭಿಃ ಶೃಣುಯಾಮ ದೇವಾಃ -- ಕಿವಿಗಳು ಒಳ್ಳೆಯದನ್ನೇ ಕೇಳಬೇಕು ಒಳ್ಳೆಯದನ್ನು ನೋಡಬೇಕು. ಅವಯವಗಳು ಸುದೃಢಗೊಂಡು ಸಂರಕ್ಷಣ ಸಾಮರ್ಥ್ಯವನ್ನು ಪಡೆಯಬೇಕು. ಮತ್ತು ಅದಕ್ಕಾಗಿ ಅನೇಕ ವೈಯಕ್ತಿಕ ಮತ್ತು ಸಾಮುದಾಯಿಕ ಸಂಗತಿಗಳನ್ನು ದೊರಕಿಸಿಕೊಳ್ಳಬೇಕು. ಈ ರೀತಿಯ ಉದಾತ್ತ ವಿಚಾರದ ಶ್ರೇಷ್ಠ ಆಶಯವನ್ನೊಳಗೊಂಡ ಶಾಂತಿಮಂತ್ರವನ್ನು ಪಠಿಸುವುದು ಸತ್ಸಂಪ್ರದಾಯವಾಗಿದೆ.

ಗಣಪತಿಯ ಪ್ರಸನ್ನತೆಗಾಗಿ ಶ್ರೀ ಗಣಪತ್ಯಥರ್ವಶೀರ್ಷದ ಜಪ ಅಥವಾ ಅಭಿಷೇಕ ಏಕಾವೃತ್ತ, ಏಕವಿಂಶತಿ ಆವೃತ್ತಿ ದಿನಾಲು ಯಥಾಶಕ್ತಿ ಮಾಡಿದರೆ ಸಂಕಟಗಳು ದೂರವಾಗುತ್ತವೆ. ಅಲ್ಲದೇ ಅಥರ್ವಶೀರ್ಷ ಹವನದಿಂದ ಸಕಲ ಮನೋಭೀಷ್ಟಗಳು ಪೂರ್ಣಗೊಳ್ಳುತ್ತವೆ. ವಿವಿಧ ದ್ರವ್ಯದ ಹೋಮಿಸುವಿಕೆಯು ಅಥರ್ವಶೀರ್ಷದ ಫಲಗಳು ಫಲಶ್ರುತಿಯ ೨ನೇ ಮಂತ್ರದಲ್ಲಿ ಹೇಳಲ್ಪಟ್ಟಿವೆ. ಹವನದಲ್ಲಿ ಎರಡು ಪಕ್ಷಗಳಿವೆ. ನಮಸ್ತೇ -- ದಿಂದ ವರದ ಮೂರ್ತಯೇ -- ಪಠಿಸಿ ಸ್ವಾಹಾಕಾರಾಂತ ಒಂದು ಆಹುತಿ ಕೊಡುವುದು ಸೂಕ್ತ ಪಕ್ಷವಾಗಿದ್ದು ಸಹಸ್ರ ಹವನಕ್ಕಾಗಿ ಸಹಸ್ರಾವೃತ್ತಿ ಮಾಡಬೇಕಾಗುತ್ತದೆ. ಖಂಡ ವಿಭಾಗ ಎರಡನೆಯದು. ಖಂಡ ವಿಭಾಗದಲ್ಲಿ ಹತ್ತು ಖಂಡಗಳಿದ್ದು ಪ್ರತಿ ಖಂಡದ ಕೊನೆಗೆ ಸ್ವಾಹಾಕಾರ ಹೇಳಿ ಆಹುತಿ ಕೊಡುವರು. ಅಂದರೆ ಏಕಾವೃತ್ತಿಯಿಂದ ದಶಾಹುತಿಯಾಗಿ ಶತಾವೃತ್ತಿಯಿಂದ ಸಹಸ್ರ ಹವನವು ಪೂರ್ಣಗೊಳ್ಳುತ್ತದೆ. ಶ್ರೀ ಗಣಪತ್ಯಥರ್ವ ಶೀರ್ಷದ ಅಯುತ ಸಂಖ್ಯಾವೃತ್ತಿಯಿಂದ ಲಕ್ಷ ಸಂಖ್ಯಾತ ಹವನ ಮಾಡಿದರೆ ಸರ್ವಾರಿಷ್ಟ ಶಾಂತಿಯು ಲಭಿಸುತ್ತದೆ.



ವಿನಾಯಕಃ ಕರ್ಮವಿಘ್ನಸಿದ್ಧ್ಯರ್ಥ ವಿನಿಯೋಜಿತಃ ಎಂದು ಯಾಜ್ಞವಲ್ಕ್ಯರು ಹೇಳಿದ್ದಾರೆ. ಯಾವುದೊಂದು ಕೆಲಸದಲ್ಲಿ ತೊಂದರೆ ತೊಡಕುಗಳು ಬರುವುದು ಶ್ರೀ ಗಣಪತಿಯ ಅವಕೃಪೆಯಿಂದ ಎಂದು ಸೂಚಿಸಲಾಗಿದೆ.

ಮಗಳಿಗೆ ವಿವಾಹವು ಕೂಡದಿರುವುದು. ಸಂತತಿ ಆಗದಿರುವುದು ಶಿಷ್ಯರುಗಳ ಅಧ್ಯಯನದಲ್ಲಿ ಅನಾಸಕ್ತಿ, ಉದ್ಯೋಗ ನೌಕರಿ ಸಿಗದಿರುವುದು, ವ್ಯಾಪಾರಿಗಳಿಗೆ ನಷ್ಟವಾಗುವಿಕೆ, ಲಾಭವಾಗದಿರುವಿಕೆ, ರೈತರಿಗೆ ಒಕ್ಕಲುತನದಲ್ಲಿ ತೊಂದರೆ ತೊಡಕುಗಳು ಬರುವಿಕೆ -- ಮೊದಲಾದ ಸಂಗತಿಗಳು ಗಣಪತಿಯ ಅವಕೃಪೆಯಿಂದ ಉಂಟಾಗುತ್ತದೆಂದು ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಹೇಳಿದೆ. ಅನೇಕ ಆಪತ್ತುಗಳಿಂದ ಬಿಡುಗಡೆಗೊಳಿಸಿ ಉಚ್ಚಸ್ಥಿತಿಗೆ ಒಯ್ಯುವ ಕೆಲಸವನ್ನು ಸಾಂಗವಾಗಿ ಪೂರ್ಣಗೊಳಿಸಿ ಸಿದ್ಧಿ -- ಇಷ್ಟಫಲ ನೀಡುವ ಶ್ರೀ ಗಣಪತಿ ದೇವತೆಯ ಉಪಾಸನೆ ಮಾಡುವುದು ಯೋಗ್ಯವಿರುತ್ತದೆ. ಯಾವ ದೇವತೆ ಭಕ್ತ ಉಪಾಸಕನಾದರೂ ಯಾವುದೇ ಸಂಪ್ರದಾಯದವನಾದರೂ ಹಿಂದೂವಾದವನು ಮೊದಲಿಗೆ ಶ್ರೀ ಗಣಪತಿಸ್ಮರಣೆ -- ಪೂಜನ ಮಾಡಲೇಬೇಕು. ಮೇಲಿನವುಗಳನ್ನು ಶ್ರೀ ಗಣಪತ್ಯಥರ್ವಶೀರ್ಷದ ಮೂಲಕ ಗಣಪತ್ಯುಪಾಸನೆ ಮಾಡಿ ಅನುಗ್ರಹ ಪಡೆಯಬಹುದಾಗಿದೆ. ಅನುಷ್ಠಾನದಿಂದ ವಾಕ್ಸಿದ್ಧಿ, ಅನೇಕಕಾಮನಾ ಪರಿಪೂರ್ತಿ, ಬ್ರಹ್ಮಲೋಕ ಪ್ರಾಪ್ತಿ, ಸರ್ವಪಾಪ ಪ್ರಣಾಶನ್ನಚತುರ್ವಿಧ ಪುರುಷಾರ್ಥ ಪ್ರಾಪ್ತಿ, ವಿದ್ಯಾಪ್ರಾಪ್ತಿ ಎಲ್ಲ ಕಾರ್ಯಗಳಲ್ಲಿ ಯಶಃಪ್ರಾಪ್ತಿ ಉಂಟು. ಅಂದರೆ ಸಕಾಮ ಅನುಷ್ಠಾನದಿಂದ ಇಚ್ಛಿತ ಫಲ ದೊರಕಿದರೆ ನಿಷ್ಕಾಮದಿಂದ ಮೋಕ್ಷವು ಲಭಿಸುತ್ತದೆ.

ಚತುರ್ಥಿ ತಿಥಿಯು ಶ್ರೀ ಗಣಪತಿ ಅನುಷ್ಠಾನಕ್ಕೆ ಉತ್ತಮ ದಿವಸವಾಗಿದೆ. ಈ ಅಥರ್ವಶೀರ್ಷದಲ್ಲಿ ಇತರ ತಿಥಿಗಳನ್ನು ಉಲ್ಲೇಖಿಸದೆ ಚತುರ್ಥ್ಯಾನ್ ಮನಶ್ನನ್ ಜಪತಿ ಎಂದಿದೆ. ಚತುರ್ಥಿ ಎಂದರೆ ತುರೀಯಾವಸ್ಥೆ. ಅವಸ್ಥಾತ್ರಯಾತೀತ ಎಂದರೆ ಜಾಗೃತಿ ಸ್ವಪ್ನ ಮತ್ತು ಸುಷುಪ್ತಿ ಈ ಮೂರು ಅವಸ್ಥೆಗಳನ್ನು ಮೀರಿದ ನಂತರ ತುರೀಯ (ನಾಲ್ಕನೆಯ) ಅವಸ್ಥೆಯಲ್ಲಿ ಗಣಪತಿಯ ಸ್ವರೂಪ ದರ್ಶನವಾಗಿ ಸಾಕ್ಷಾತ್ಕಾರವಾಗುವುದು. ಅದಕ್ಕಾಗಿ ಚತುರ್ಥಿ ತಿಥಿಯು ವಿಶೇಷವಾದ ಮಹತ್ತತೆಯನ್ನು ಪಡೆದುಕೊಂಡಿದೆ. ಬ್ರಾಹ್ಮಣ ಬಾಲಕರಿಗೆ ಹೆಚ್ಚಾಗಿ ಉಪನಯನವಾದ ನಂತರ ಸಂಧ್ಯಾವಂದನೆ ಅಗ್ನಿಕಾರ್ಯಾದಿ ನಂತರ ಕಲಿಸುವುದೇ ಶ್ರೀ ಗಣಪತ್ಯಥರ್ವಶೀರ್ಷ ಆಗಿದೆ. ಶ್ರೀ ಅಥರ್ವಶೀರ್ಷದಿಂದ ಬಾಲಕನು ವಾಕ್ ಶುದ್ಧಿಯನ್ನು ಪಡೆಯುತ್ತಾನೆ. ಆಮೇಲೆಯೇ ಉಳಿದ ಸೂಕ್ತಮಂತ್ರಾದಿಗಳನ್ನು ಕಲಿಸುವರು.

ಶ್ರೀ ಗಣಪತ್ಯಾಥರ್ವಶೀರ್ಷದಲ್ಲಿ 'ಗಂ ಬೀಜ' ಹೇಳಿದೆ. 'ಗಂ' ಈ ಬೀಜಮಂತ್ರವನ್ನು ಯೋಗ್ಯ ಸುಶಾಸ್ತ್ರೀಯವಾಗಿ ಉಚ್ಚಾರಿಸಿದಾಗ ಆ ಸೂಕ್ಷ್ಮ ನಾದಲಹರಿಯು ಮೂಲಾಕಾಶದಲ್ಲಿ ನಿರ್ಮಾಣವಾಯಿತು. ಅದು ಘನರೂಪವಾದಾಗಲೇ ಆಗುವ ಆಕಾರವು ಸಿದ್ಧಗೊಂಡು ಶ್ರೀ ಗಣಪತಿಯ ಸ್ವರೂಪವು ಕಂಡುಬರುತ್ತದೆ. ಗಂ ಈ ಬೀಜದಿಂದ ನಿರ್ಮಾಣವಾದ ನಾದಲಹರಿಯು ಘನರೂಪವಾಗಿ ಸಿದ್ಧಗೊಂಡ ಆಕಾರಗಳು ವಕ್ರತುಂಡ ಗಜಮುಖ ಈ ವರ್ಣನೆಯಂತೆ ಆಗುತ್ತದೆ. ಅಖಿಲ ರಾಷ್ಟ್ರಕ್ಕೆ ಉತ್ಕರ್ಷವನ್ನು ದೊರಕಿಸಿ ಕೊಡುವ ಶಕ್ತಿಯ ಸಂಶೋಧನೆ ಮಾಡಿ ಆ ಶಕ್ತಿಯ ಬೀಜಮಂತ್ರ ಗಂ ಯೋಗಶಾಸ್ತ್ರದ ರೀತಿಯಿಂದ ಶೋಧಿಸಲಾಯಿತು.

ಗಣಪತ್ಯಥರ್ವಶೀರ್ಷದಲ್ಲಿಯ ಗಣೇಶವಿದ್ಯೆಯಲ್ಲಿ ಧ್ವನಿ ವಿಜ್ಞಾನದ ಅಂಶವು ಅಡಗಿದೆ. ಸರ್ವಮೂಲ ಸರ್ವಾಧಾರ ಸರ್ವವ್ಯಾಪಿ ನಾದಬ್ರಹ್ಮನ ಸ್ಫೋಟದಿಂದ ವೈಖರಿ ತನಕ ಪ್ರಕಟೀಕರಣ ಹೇಳುವ ವೈದಿಕ ಧ್ವನಿಶಾಸ್ತ್ರ ಮತ್ತು ಇದರಷ್ಟೇ ಸಾಕ್ಷೇಪಿ ತರ್ಕಾಧಿಷ್ಠಿತ ಮಾಹೇಶ್ವರೀವರ್ಣಲೇಖನವಿದ್ಯೆ ಇವೆಲ್ಲ ಸಂಗತಿಗಳು ಅಥರ್ವಶೀರ್ಷದಲ್ಲಿ ಸಮಾವಿಷ್ಟಗೊಂಡಿದೆ. ಈ ಅಥರ್ವ ಶೀರ್ಷವನ್ನು ಅಂದರೆ ಈ ಜ್ಞಾನ ನಿಧಿಯನ್ನು ಶಿಷ್ಯನಾಗದವನಿಗೆ ಹೇಳಿಕೊಡಬಾರದು. ಮೋಹದಿಂದ ಒಂದು ವೇಳೆ ಕಲಿಸಿದರೆ ಆತನು ಪಾಪಿಯಾಗುವನು ಎಂದು ಅಥರ್ವಶೀರ್ಷದ ೧೧ನೆಯ ಮಂತ್ರವು (ಫಲಶ್ರುತಿಯ ೧ನೆಯ ಮಂತ್ರವು) ಆದೇಶಿಸುತ್ತದೆ. ಆವಿರ್ಭೂತಂ ಚ ಸೃಷ್ಟ್ಯಾದೀ -- ಎಂಬಂತೆ ಶ್ರೀ ಗಣಪತಿಯು ಸೃಷ್ಟಿಯ ಉತ್ಪತ್ತಿಗಿಂತ ಮೊದಲೇ ಇದ್ದದ್ದರಿಂದ ಗಣಪತಿಯನ್ನು ಆದ್ಯದೇವತೆಯೆನ್ನುವರು. ಅಲ್ಲದೇ ಆತನು ಪ್ರಕೃತಿ ಪುರುಷರಿಗೂ ಮೀರಿದ್ದಾನೆ. ಇಂತಹ ಆದ್ಯದೇವತೆ ಶ್ರೀ ಗಣಪತಿಗೆ ಆರಂಭದಲ್ಲಿ ಪೂಜಿಸಿದರೆ ನಿರ್ವಿಘ್ನತೆಯು ಉಂಟಾಗಿ ಕಾರ್ಯವು ಯಶವನ್ನು ಪಡೆಯುತ್ತದೆ.

ಶ್ರೀ ಕಾಕಾಪುರಾಣಿಕರಿಗೆ ಆದ ಅನುಭವವು ಇಂತಿದೆ. ಇವರಿಗೆ ಒಮ್ಮೆ ಕೆಡಕುಗಳು ಬೆನ್ನಟ್ಟಿ ಬರಹತ್ತಿದವು. ವಿವಿಧ ಪ್ರಕಾರಗಳ ಕೋರ್ಟು ಮೋಕದ್ದಮೆಗಳು ಬಂದು ಕಾಣಿಸಿದವು. ಇದ್ದ ನೌಕರಿಯು ಹೋಯಿತು. ಇವರಿಗಿದ್ದ ಜನಪ್ರೀತಿಯು ನಶಿಸಿತು. ಕೈಗೆ ಸಿಕ್ಕಿದ ಕೆಲಸಗಳನ್ನು ಮಾಡಿ ಹೊಟ್ಟೆ ತುಂಬಿಸಿಕೊಳ್ಳುವ ಪರಿಸ್ಥಿತಿ ಬಂದಿತು.

ಶ್ರೀ ಪುರಾಣಿಕರ ಹಿರಿಯರಿಗೆ ಸಿಲೋನದಲ್ಲಿ ದೊರಕಿದ ಬಲಮುರಿಸೊಂಡಿಲಿನ ದಶಭುಜ ಹಾಗೂ ಶಾರದಾ ಸಹಿತ ಸಲ್ಲಕ್ಷಣ ಗಣಪತಿಯ ಮೂರ್ತಿಯ ಆರಾಧನೆ ಮಾಡಲು ಓರ್ವ ಸತ್ಪುರುಷರು ಹೇಳಿದರು. ಅದರಂತೆ ಉಪಾಸನೆ ಆರಂಭವಾಯಿತು. ಮೊದಲು ೨೧ ಅಕ್ಷತೆಗಳನ್ನು ಕೊಂಡು ಅಥರ್ವಶೀರ್ಷದ ಒಂದೊಂದು ಮಂತ್ರದಿಂದ ಒಂದೊಂದು ಅಕ್ಷತೆಯನ್ನು ಗಣಪತಿಗರ್ಪಿಸಿ ಆವಾಹನ ಮಾಡಿದನಂತರ ಪರಿಮಾಣದಲ್ಲಿ ಮೂರ್ತಿಕೊಂಡು ೨೧ ಅಥರ್ವಶೀರ್ಷ ಮಂತ್ರದ ಅಭಿಷೇಕ ಮಾಡಿದರು. ಆಮೇಲೆ ಆಸನದ ಮೇಲೆ ೨೧ ದೂರ್ವಾಂಕುರ ಒಂದೊಂದು ಅಥರ್ವಶೀರ್ಷದಿಂದ ಮಂತ್ರಿಸಿ ಆಸನ ಸಿದ್ಧಗೊಳಿಸಿ ಅದರ ಮೇಲೆ ಶ್ರೀ ಗಣಪತಿಯನ್ನು ಸ್ಥಾಪಿಸಲಾಯಿತು. ಒಂದೊಂದು ದೂರ್ವಾಂಕುರಗಳಲ್ಲಿ ಒಂದೊಂದು ಅಥರ್ವಶೀರ್ಷದಿಂದ ಈ ರೀತಿಯಾಗಿ ೨೧ ದೂರ್ವಾಂಕುರಗಳನ್ನು ಅಭಿಮಂತ್ರಿಸಿ ಅರ್ಪಿಸಲಾಯಿತು. ಕೊನೆಗೆ ೨೧ ಅಕ್ಷತೆಗಳಿಂದ ಆರಂಭದ ರೀತಿಯಂತೆ ಒಂದೊಂದು ಅಕ್ಷತೆ ಅಭಿಮಂತ್ರಿಸಿ ಅರ್ಪಿಸಿ ವಿಸರ್ಜಿಸಲಾಯಿತು. ಈ ವಿಧಿಯನ್ನು ಚತುರ್ಥಿ ತಿಥಿಯಂದು ಆರಂಭಿಸಿ ಇಪ್ಪತ್ತೊಂದು ದಿವಸಗಳ ತನಕ ನಡೆಯುತ್ತಿತ್ತು. ಇಪ್ಪತ್ತೆರಡನೆಯ ದಿವಸದಿಂದ ದಿನಾಲು. ಪ್ರತಿ ಒಂದು ಅಥರ್ವಶೀರ್ಷ ಮಂತ್ರದಿಂದ ಒಂದು ಎಂಬಂತೆ ೨೧ ಬಾರಿಗೆ ದಿನಾಲು ಹವನವಿದೆ. ಈ ರೀತಿಯಾಗಿ ಚತುರ್ಥಿ ತಿಥಿಯ ತನಕ ಹವನ ಮಾಡುತ್ತ ಮತ್ತು ಚತುರ್ಥಿ ದಿವಸದಂದು ಉಪೋಷಣೆಯಿಂದ ಇದ್ದು ರಾತ್ರಿ ಸುವಾಸಿನಿ ಬ್ರಾಹ್ಮಣಾದಿಗೆ ವ್ರತ ವಿಸರ್ಜನೆಯಿರುತ್ತದೆ. ಈ ೨೦--೨೧ ದಿವಸಗಳ ಅವಧಿಯಲ್ಲಿ ಓಂ ಗಂ ಗಣಪತಯೇ ನಮಃ ಈ ಮಂತ್ರ ಜಪವನ್ನು ಯಥಾಕಾಲದಲ್ಲಿ ಮಾಡುತ್ತಿದ್ದರು.

ಈ ರೀತಿಯಲ್ಲಿ ಉಪಾಸನೆ ಮಾಡುತ್ತಿರುವಾಗ ೫ನೆಯ ದಿವಸದಿಂದ ಪರಿಸ್ಥಿತಿಯಲ್ಲಿ ಮಾರ್ಪಾಡಾಗಹತ್ತಿತು. ಅವರೊಟ್ಟಿಗೆ ಸಂಬಂಧವೇ ಇಲ್ಲದ ಸುಪ್ರಸಿದ್ಧ ವಕೀಲರಿಬ್ಬರು ಬಂದು ನ್ಯಾಯಾಲಯದಲ್ಲಿದ್ದ ಮೊಕದ್ದಮೆಗಳನ್ನೇ ನಿಃಶುಲ್ಕವಾಗಿ ತೆಗೆದು ಹಾಕಿದರು. ಶ್ರೀ ಕಾಕಾಪುರಾಣೀಕರಿಗೆ ಎಂದಿನಂತೆ ಮೊದಲಿನ ಸ್ಥಾನಮಾನಗಳು ಲಭಿಸಿದವು. ಇದೇ ರೀತಿಯಲ್ಲಿ ಅನೇಕರು ಅಥರ್ವಶೀರ್ಷ ವಿಧಾನದಿಂದ ಶ್ರೀ ಗಣಪತಿಯ ಅನುಗ್ರಹವನ್ನು ಪಡೆದಿರುತ್ತಾರೆ.

ಗಣಪತಿಯ ಏಕವಿಂಶತಿ ಆವರ್ತನ--

ರುದ್ರದ ಲೋಕಾದಶಿನಿಯಂತೆ ಶ್ರೀ ಗಣಪತ್ಯಥರ್ವಶೀರ್ಷ ಮಂತ್ರದ ೨೧ ಆವರ್ತನವನ್ನು ಹೇಳಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು | | |
| ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

ದ್ದಾರೆ. ಕಾರಣ ರುದ್ರ (ಶಿವ)ನಿಗೆ ೧೧ ಅಂಕಿ ಪ್ರಿಯ ಹೇಳಿದ್ದಾರೆ. ಅಂದರಂತೆ ಗಣಪತಿಗೆ ೨೧ ಅಂಕಿ ಪ್ರೀತಿಯದು ಎಂದಿದ್ದಾರೆ. ಅದಕ್ಕಾಗಿ ಅಥರ್ವಶೀರ್ಷವನ್ನು ೨೧ ಬಾರಿ ಪಠಿಸುವ ಪರಂಪರೆಯಿದೆ. ಆರಂಭದಲ್ಲಿ ಒಮ್ಮೆ ಶಾಂತಿಮಂತ್ರ ಪಠಿಸಿ ಆಮೇಲೆ ಓಂ ನಮಸ್ತೆ ಗಣಪತಯೇ ದಿಂದ ವರದಮೂರ್ತಯೇ ನಮಃ ತನಕ ಭಾಗ ೨೧ ಬಾರಿ ಪಠಿಸಿ ಮತ್ತು ಆಮೇಲೆ ಫಲಾದೇಶ ಕೊನೆಗೆ ಶಾಂತಿ ಮಂತ್ರ ಪಠಿಸದೇಕು. ಹೀಗೆ ಮಾಡುವುದರಿಂದ ಶ್ರೀ ಗಣಪತಿಗೆ ಏಕವಿಂಶತಿ ಆವರ್ತನ ಪೂರೈಸಿದಂತಾಗುತ್ತದೆ.

ಈ ಅಥರ್ವಶೀರ್ಷವು ಮಹಾವಿಘ್ನ, ಮಹಾದೋಷ ಮತ್ತು ಮಹಾಸಂಕಟಗಳಿಂದ ಬಿಡುಗಡೆಗೊಳಿಸುತ್ತದೆ ಎಂದು ಆರಂಭದಿಂದ ಕೊನೆಯ ತನಕ ಹೇಳಿದೆ. ಅಥರ್ವಶೀರ್ಷದಿಂದ ಸಿದ್ಧಿ ಪಡೆದವನು ಎಲ್ಲವುಗಳನ್ನು ಅರಿತಿರುವನಂಥಹವನು. ಎಂದರೆ ಅವನಿಗೆ ಜೀವನದ ಎಲ್ಲ ತತ್ವಜ್ಞಾನಗಳು ಲಭಿಸುತ್ತವೆ. ಈ ಅಥರ್ವಶೀರ್ಷವು ಚಿಕ್ಕದಾಗಿದ್ದರೂ ಕೂಡ ಇದರ ಜ್ಞಾನನಿಧಿ ಅತ್ಯಂತ ಆವಶ್ಯಕವಾಗಿರುವುದು. ಹೀಗಾಗಿ ಇದರ ಶ್ರವಣ ಮನನ ಅಧ್ಯಯನ ಮಾಡುವ ಸರ್ವಜ್ಞನಾಗುವನು.

ಸತ್ಯ ಒಂದೇ ಇದ್ದು ಇಡೀ ವಿಶ್ವವು ಅದರಿಂದ ರಚನೆಗೊಂಡಿದೆ. ಎಲ್ಲ ವಿಶ್ವಾಸಗಳ ರೂಪವು ಸತ್ಯದ ರೂಪವೇ ಆಗಿರುತ್ತದೆ. ವಾಣಿ, ಜೀವನ, ಜ್ಞಾನ, ವಿಜ್ಞಾನ, ಮತ್ತು ಆನಂದ ಇವುಗಳೆಲ್ಲವೂ ಒಂದೇ ಭಾವವನ್ನು ಹೊಂದಿರುತ್ತದೆ. ಇದರ ಹೊರತು ಇಲ್ಲಿ ಯಾರೂ ಇಲ್ಲ. ಅಂದರೆ ಗಣಪತಿಯಲ್ಲಿ ಎಲ್ಲವೂ ಇದೆ ಎಂಬುದನ್ನು ಸಂಕ್ಷೇಪವಾಗಿ ಹೇಳಬಹುದು.

ಗಣಪತಿಯ ಸ್ತವನ ಮಾಡಿ ಉಪಾಸಿಸಿ ವ್ಯಕ್ತಿಯ, ಮನಸ್ಸಿನ ಅದರಂತೆ ಸಮಾಜರೂಪಿ ಗಣಗಳ ಸ್ಥಿರತೆ ಶಾಂತಿ ಮತ್ತು ಒಂದೇ ಧ್ಯೇಯದ ಒಂದೇ ರೂಪವನ್ನು ದೊರಕಿಸಿಕೊಂಡು ಇಡೀ ವಿಶ್ವದೊಳಗೆ ಶಾಂತಿ ಆನಂದವನ್ನು ನೆಲೆಸುವಂತೆ ಮಾಡುವುದೇ ಶ್ರೀ ಗಣಪತಿ ಅಥರ್ವಶೀರ್ಷದ ಮುಖ್ಯ ಉದ್ದೇಶವಾಗಿದೆ.

(ವಿವಿಧ ಗ್ರಂಥಾಧಾರ)



# ಸಾರ್ವಜನಿಕ ಗಣೇಶೋತ್ಸವ

---ಸುಮಿತ್ರಾ ಶಾನಭಾಗ.

ಓಂ ಶ್ರೀ ಗಣೇಶಾಯ ನಮಃ ಎಂದು ಪ್ರಾರ್ಥಿಸದೆ ಹಿಂದುಗಳಲ್ಲಿ ಯಾವುದೇ ಶುಭಕಾರ್ಯ ಆರಂಭವಾಗುವುದಿಲ್ಲ. ಗಣೇಶನ ಮೇಲಿನ ನಂಬಿಕೆಗಳು ದೃಢವಾಗುತ್ತ ಹೋದಂತೆ ಪ್ರಾಚೀನ ಹಾಗೂ ಐತಿಹಾಸಿಕ ದೇವಾಲಯಗಳೊಂದಿಗೆ ಹೊಸತಾಗಿ ಚಿಕ್ಕಪುಟ್ಟ ಪೂಜಾ ಮಂದಿರಗಳು ಹುಟ್ಟುತ್ತಲೇ ಇರುವುದನ್ನು ನಾವು ಕಾಣಬಹುದು.

ವಿಘ್ನ ನಿವಾರಕ, ಸಕಲ ಇಷ್ಟಾರ್ಥ ಸಿದ್ಧಿದಾಯಕನೆಂಬುದು ಗಣಪತಿಯ ಬಗೆಗಿರುವ ನಂಬಿಕೆ. ಆದ್ದರಿಂದಲೇ ಆತನು ಆದಿಪೂಜಿತನಾಗಿದ್ದಾನೆ. ಭಾದ್ರಪದ ಶುದ್ಧ ಚವತಿಯು ವಿನಾಯಕನ ವ್ರತಮಾಡಲು ಪ್ರಶಸ್ತ ದಿನವೆಂದು ಹಿಂದಿನಿಂದಲೂ ರೂಢಿಯಲ್ಲಿದೆ. ಪ್ರತಿಯೊಂದು ವ್ರತಗಳಿಗಿರುವಂತೆ ಸಿದ್ಧಿ ವಿನಾಯಕ ವ್ರತಕ್ಕೂ ಕೆಲವುನೇಮ--ನಿಷ್ಠೆಗಳಿವೆ. ನೇಮ--ನಿಷ್ಠೆಗಳನ್ನೂ ಮಾಡಲಾಗದಿದ್ದವರಿಗೂ ಒಗ್ಗುವಂತೆ ಕ್ರಮೇಣ ಈ ವ್ರತ ಸರಳೀಕೃತವಾಗಿ ಗಣಪತಿಯನ್ನು ಇಷ್ಟಾನುಸಾರವಾಗಿ ಪೂಜಿಸಿ ಹರ್ಷಪಡುವ ಹಬ್ಬವಾಗಿ ಆಚರಣೆಯಲ್ಲಿದೆ.

ದೇಶಭಕ್ತಿಯ, ಏಕತೆಯ ಹೆಚ್ಚಿನ ಅರಿವನ್ನು ಮೂಡಿಸಲು, ಮತ್ತೆ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಒಂದು ಸಾಧನವಾಗಿ ಸಾರ್ವಜನಿಕವಾಗಿ ಗಣೇಶ ಪ್ರಜ್ಞೆ ಮೂಡಿಸಿ ಸಫಲರಾದವರು ಲೋಕಮಾನ್ಯ ಬಾಲ ಗಂಗಾಧರ ತಿಲಕರು. ಬ್ರಾಹ್ಮಣ ಹಾಗೂ ಮೇಲು ವರ್ಗದವರಿಗೆ ಮಾತ್ರ ಸೀಮಿತವಾಗಿದ್ದ ಗಣೇಶ ಸಾಮಾನ್ಯ ಜನತೆಯ ಪ್ರೀತಿಯ ದೈವವಾದ. ಹಳ್ಳಿ--ಹಳ್ಳಿಗಳಲ್ಲೂ, ನಗರಗಳಲ್ಲೂ ಕ್ರಮೇಣ ಹೆಚ್ಚಾಗುತ್ತಾ ಬಂದು ಈಗ ಗಲ್ಲಿ--ಗಲ್ಲಿಗಳಲ್ಲಿ ಸಾರ್ವಜನಿಕ ಗಣೇಶೋತ್ಸವಗಳು ಜರುಗುತ್ತಿವೆ. ಶಾಲಾ--ಕಾಲೇಜುಗಳಲ್ಲಿ, ಅನೇಕ ಸಂಘ ಸಂಸ್ಥೆಗಳ ಆಶ್ರಯದಲ್ಲಿ ಗಣೇಶನನ್ನು ಪ್ರತಿಷ್ಠಾಪಿಸಿ ಪೂಜಿಸುವ ಹಾಗೂ ಇದರ ಅಂಗವಾಗಿ ಅನೇಕ ಸಾರ್ವಜನಿಕ ಕಾರ್ಯಕ್ರಮಗಳು ನಡೆಯುವಂತಾಯಿತು. ಮನೆಗಳಲ್ಲಿ ಒಂದೆರಡು ದಿನ ಆಗುವ ಹಬ್ಬ ಮೂರು ದಿನ, ಒಂದು ವಾರ ತಿಂಗಳಿಗಳ ಕಾಲ ನಡೆಯುವುದು ಮೊದಲಾಯಿತು.

ಸಾರ್ವಜನಿಕ ಉತ್ಸವಗಳು ಹೆಚ್ಚಾಗುತ್ತ ಹೋದಂತೆ ಗಣಪತಿಯ ಮೂರ್ತಿಗಳು ಕೂಡ ಬೃಹತ್ ಗಾತ್ರ ಹಾಗೂ ವಿವಿಧ ವಿನ್ಯಾಸಗಳನ್ನು ಪಡೆದವು. ಮೂರ್ತಿಗಳನ್ನು ಮಾಡುವವರಿಗೆ ಹಾಗೂ ಅಲಂಕಾರಿಕ ಮಂಟಪಗಳನ್ನು ರಚಿಸುವ ಕಲಾಕಾರರಿಗೆ ಹೆಚ್ಚಿನ ಉತ್ತೇಜನ ದೊರೆಯಿತು. ಎಲ್ಲಕ್ಕೂ ಮಿಗಿಲಾಗಿ ಸಾರ್ವಜನಿಕ ಗಣೇಶೋತ್ಸವವು ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ವೇದಿಕೆಯನ್ನು ಒದಗಿಸಿತು. ಯಕ್ಷಗಾನ, ಹರಿಕಥೆ, ಸಂಗೀತ, ನೃತ್ಯ ನಾಟಕ ಮುಂತಾದವುಗಳನ್ನು ಮಾಡುವ ಕಲಾವಿದರಿಗೆ ಒಳ್ಳೆಯ ಅವಕಾಶಗಳು ದೊರೆತವು. ಇಂಥ ಸಂದರ್ಭದ ಅವಕಾಶ ಒದಗಿಸಿಕೊಂಡು ಅನೇಕ ಸಂಘ ಸಂಸ್ಥೆಗಳು ಪ್ರತಿಭಾನ್ವಿತರನ್ನು, ಹಿರಿಯ ಕಲಾವಿದರನ್ನು ಸನ್ಮಾನಿಸುವ ಪರಿಪಾಠ ಬೆಳೆಸಿಕೊಂಡವು. ಇಂದಿಗೂ ಅನೇಕ ಸಾರ್ವಜನಿಕ ಗಣೇಶೋತ್ಸವ ಸಮಿತಿಗಳು ಉತ್ತಮ ಕೆಲಸ ನಿರ್ವಹಿಸುತ್ತಿದ್ದು ಸಾಮೂಹಿಕ ಉಪನಯನ, ಮದುವೆ ಹೀಗೆ ಅನೇಕ ಜನಹಿತಾಸಕ್ತಯ ಕೆಲಸಗಳನ್ನು ಮಾಡುತ್ತಿವೆ. ಕೆಲವು ಕಡೆ ತಾವು ಗಣೇಶೋತ್ಸವ ನಡೆಸುತ್ತಿದ್ದ ಸ್ಥಳಗಳಲ್ಲಿಯೇ ಗಣೇಶ ಮೂರ್ತಿಯನ್ನು ಪ್ರತಿಷ್ಠಾಪಿಸಿ ದೇವಾಲಯಗಳನ್ನು ಕಟ್ಟಿಸಿದ ಉದಾಹರಣೆಗಳಿವೆ.

ಆದರೆ ಇತ್ತೀಚೆಗೆ ಹೆಚ್ಚಿನ ಸಾರ್ವಜನಿಕ ಗಣೇಶೋತ್ಸವಗಳು ಅದರ ಮೂಲ ಉದ್ದೇಶ ಹಾಗೂ ಅರ್ಥವನ್ನು ಕಳೆದುಕೊಳ್ಳುತ್ತಿವೆ. ಗಣೇಶ ಮಂಡಳಿಗಳ ಪೈಪೋಟಿ ಬಹಳಷ್ಟು ಸಲ ಗಾಂಭೀರ್ಯ ಹಾಗೂ ಅರ್ಥವನ್ನು ಕಳೆದುಕೊಂಡು ಮೂಲ ಉದ್ದೇಶಕ್ಕೆ ಭಂಗವನ್ನುಂಟು ಮಾಡುತ್ತವೆ. ಗಣೇಶನ ವಿಗ್ರಹದ ಗಾತ್ರದಲ್ಲಿ, ಅಲಂಕಾರದಲ್ಲಿ, ಆಡಂಬರದಲ್ಲಿ ಅಹಿತಕರ ಪೈಪೋಟಿ ನಡೆದು ಮೂಲತತ್ವವನ್ನೇ ಮರೆತಿವೆ. ವಿವಿಧ ದೃಶ್ಯಾವಳಿಗಳ ಜೋಡಣೆಗೆ ಹೆಚ್ಚಿನ ಮಹತ್ವ ಕೊಡಲಾಗುತ್ತಿದೆ. ಗಣೇಶೋತ್ಸವದಲ್ಲಿ ಗಣೇಶನಿಗಿರಬೇಕಾದ ಪ್ರಾಧಾನ್ಯತೆಯನ್ನು ಕಡೆಗಣಿಸಿ ಬೇರೆ ಬೇರೆ ದೃಶ್ಯಾವಳಿಗಳಿಗೆ ಮಹತ್ವ ಕೊಡಲಾಗುತ್ತಿದೆ. ಗಣಪತಿಯ ಕಥೆಗೆ ಸಂಬಂಧವಿಲ್ಲದ -- ಅಲಂಕಾರಗಳನ್ನು ಮಾಡಿ ವಸ್ತು ಪ್ರದರ್ಶನವನ್ನು ನೋಡುವಂತೆ ಈ ಅಲಂಕಾರಗಳನ್ನು ನೋಡಿ ಹೋಗುವುದಾಗಿದೆ. ಜನರನ್ನು ಮತ್ತಷ್ಟು ಆಕರ್ಷಿಸಲು ವಿಮಾನವೇರಿದ ಗಣಪತಿ, ಟೋಪಿ ಹಾಕಿ ಧೋತರ ಉಟ್ಟು ಮಂತ್ರಿಯ ಹಾಗೆ ನಿಂತ ಗಣಪತಿ, ಕ್ರಿಕೆಟ್ ಆಡುತ್ತಿರುವ ಗಣಪ, ಹೆಗಲಿಗೆ ಪುಸ್ತಕದ ಚೀಲ ಹೊತ್ತು ನಿಂತಿರುವ ವಿದ್ಯಾರ್ಥಿ ಗಣಪತಿ ಹೀಗೆ ನಾನಾ ರೀತಿಯಲ್ಲಿ ಗಣಪತಿಯ ಮೂರ್ತಿಗಳನ್ನು ರಚಿಸಿ ಇಡಲಾಗುತ್ತಿದೆ. ಇದರಿಂದಾಗಿ ಜನರಲ್ಲಿ ಗಣಪತಿಯ ಬಗ್ಗೆ ಶ್ರದ್ಧಾಭಾವನೆ ಇಲ್ಲದೆ ಕ್ಷಣಿಕ ಮನರಂಜನೆಗಾಗಿಯೇ ಗಣೇಶೋತ್ಸವ ಎಂಬ ಪ್ರವೃತ್ತಿ ಬೆಳೆಯುತ್ತಲಿದೆ.

ಹೀಗಾಗಿ ಸಾರ್ವಜನಿಕ ಗಣೇಶೋತ್ಸವ ಗೊಂದಲ ಗಲಭೆಗಳಿಗೆ ಆಸ್ಪದ ಕೊಡದೆ, ಹಣದ ವಿಚಾರದಲ್ಲಿ ಜನರನ್ನು ಹೆಚ್ಚಿಗೆ ಸುಲಿಯದೇ ವೇದಿಕೆಯಲ್ಲಿ ಅನ್ಯ ದೃಶ್ಯಾವಳಿಗಳಿಗೆ ಕಡಿಮೆ ಮಹತ್ವ ಕೊಟ್ಟು ಗಣೇಶನಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟು ಆದಷ್ಟು ಸರಳ ರೀತಿಯಲ್ಲಿ ಗಣೇಶೋತ್ಸವ ಆಚರಿಸುವುದು ಅವಶ್ಯವಾಗಿದೆ. *



ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ದೇರೆ ದೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ : ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ೬ನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

**ಕಾಲ : ಬೆಳಗ್ಗೆ ೮ ರಿಂದ**
**ರಾತ್ರಿ ೮ ರ ವರೆಗೆ**

**ಟಿಕೆಟ್ ರೂ. ೧--೦೦ (ಹಿರಿಯರಿಗೆ)**
**" " ೦--೫೦ (ಕಿರಿಯರಿಗೆ)**

# ಅರ್ಕ ಮಹಾಗಣಪತಿ

---ನಿರ್ಮಲಾರಾವ್.

ನಮ್ಮ ದೇಶದಲ್ಲಿ ದೇವಾಲಯಗಳ ಉಗಮ ಹೇಗೆ ಆಯಿತೆಂಬುದು ಯಾರಿಗೂ ತಿಳಿಯದ ಅಂಶ. ವೇದಗಳ ಕಾಲದಲ್ಲಿ ದೇವಾಲಯಗಳಿದ್ದ ಬಗ್ಗೆ ಎಲ್ಲೂ ವಿವರವಿಲ್ಲ. ನಾವು ದೇವಾಲಯಗಳು ಹುಟ್ಟಿದ ರೀತಿ ಹೀಗೆಂದು ಊಹಿಸಬಹುದು. ವೈದಿಕ ಯಜ್ಞಗಳನ್ನು ಮಾಡುತ್ತಿದ್ದ ಯಾಗಶಾಲೆಯೇ ಹಂತ ಹಂತವಾಗಿ ಅನೇಕ ಭಕ್ತಿ ಪಂಥಗಳ ಪ್ರಭಾವ ದಿಂದ ದೇವಾಲಯವಾಗಿ ಮಾರ್ಪಟ್ಟಿರಬಹುದು. ಅದೇನೇ ಇರಲಿ. ಇಂದು ನಮ್ಮ ಭಾರತ ದೇಶದಲ್ಲಿ ಅನೇಕದೇವಾಲಯಗಳು ಆಸ್ತಿಕರನ್ನು ಆಕರ್ಷಿಸಿರು ವುದಂತೂ ನಿತ್ಯ ಸತ್ಯ.

ಕರ್ನಾಟಕ ರಾಜ್ಯದ ರಾಜಧಾನಿಯಾದ ಬೆಂಗ ಳೂರಿನಂತಹ ಮಹಾನಗರದ ಜನನಿಬಿಡ ಕೆಂಪೇ ಗೌಡ ರಸ್ತೆಯಲ್ಲಿ ಶ್ರೀ ಅರ್ಕಮಹಾಗಣಪತಿಯು ಬಗುಳಾಂಬದೇವಿ, ಶ್ರೀ ಚಕ್ರ, ನವಗ್ರಹ ವೃಕ್ಷಗಳ ಮಧ್ಯೆ ಪ್ರತಿಷ್ಠಾಪಿತನಾಗಿರುವುದು ಒಂದು ವೈಶಿ ಷ್ಟ್ಯವೇ ಸರಿ.

ವಿನಾಯಕನನ್ನು ಪೂಜಿಸದವರೇ ಇಲ್ಲ. ಗಣ ಪತಿ, ಸೂರ್ಯ, ಮಹಾವಿಷ್ಣು, ಶಕ್ತಿ ಮತ್ತು ಶಿವ ಎಂಬ ಐದು ರೂಪಗಳಲ್ಲಿ ಹಿರಿಯರು ಭಗವಂತ ನನ್ನು ಆರಾಧಿಸುತ್ತಾ ಬಂದಿದ್ದಾರೆ. ಈ ಅನಂತ ಶಕ್ತಿ ಮಯ ರೂಪಗಳಲ್ಲಿ ಶ್ರೀಮನ್ಮಹಾಗಣಪತಿಯದೇ ಮೊದಲ ರೂಪ. ಆದ್ದರಿಂದಲೇ ಬಾರತೀಯರು ಮೊದಲ ಪೂಜೆಯನ್ನು ವಿನಾಯಕನಿಗೆ ಸಲ್ಲಿಸು ತ್ತಾರೆ.

ಅಭೀಪ್ಸಿತಾರ್ಥ ಸಿದ್ಧ್ಯರ್ಥಂ
ಪೂಜಿತೋ ಯಸ್ಸುರೈರಪಿ
ಸರ್ವವಿಘ್ನಚ್ಛಿದೇ ತಸ್ಮೈ
ಗಣಾಧಿಪತಯೇ ನಮಃ

--ಎಂದರೆ 'ಯಾವ ಗಣಪತಿಯನ್ನು ದೇವತೆ ಗಳೂ ಸಹ ತಮ್ಮ ಅಭೀಷ್ಟ ಸಿದ್ಧಿಗಾಗಿ ಪೂಜಿಸಿ ದರೊ ಆ ವಿಘ್ನಹರನಾದ ಗಣಪತಿಗೆ ನಮಸ್ಕಾರ' ಎಂದು ಹೇಳಲಾಗಿದೆ.

ಗಣಪತಿಯು ಚತುರ್ಯುಗ ಮೂರ್ತಿಯಾಗಿ ದ್ದಾನೆ. ಕೃತಯುಗದಲ್ಲಿ ಸಿಂಹವಾಹನನಾಗಿ ಅಷ್ಟ ಭುಜನಾಗಿ ದೈತ್ಯ ಸಂಹಾರ ಮಾಡಿದರೆ, ತ್ರೇತಾ ಯುಗದಲ್ಲಿ ಮಯೂರೇಶ ಎನಿಸಿಕೊಂಡು ಆರು ಭುಜಗಳುಳ್ಳ ಸಿದ್ಧಿದಾಯಕನೆನಿಸಿಕೊಂಡು, ಭಗ ವಾನ್ ಶ್ರೀ ರಾಮಚಂದ್ರ ತನ್ನ ಕಾರ್ಯ ಸಾಧ ನೆಗಾಗಿ ಮೊದಲ ಪೂಜೆ ಗಣಪತಿಗೆ ನೀಡಿ, ಗಣ ಪತಿ ಲೋಕವಂದ್ಯನೆಂದು ನಿರೂಪಿಸಿದ್ದಾನೆ. ದ್ವಾಪ ರದಲ್ಲಿ ಗಜಾನನನೆನಿಸಿ ಚತುರ್ಭುಜನಾಗಿ ರಕ್ತವ ರ್ಣದಿಂದ ಶೋಭಿತನಾದ ಈತ ಶಂಬರಾಸುರ ನನ್ನು ಸಂಹರಿಸಿದ. ಸ್ಯಮಂತಕ ಮಣಿಯನ್ನು ಕದ್ದ ಅಪವಾದದಿಂದ ದೂರವಾಗಲು ಶ್ರೀಕೃಷ್ಣ ಗಣಪ ತಿಯ ಮೊರೆಹೊಕ್ಕನು. ಕಲಿಯುಗದಲ್ಲಿ ಶ್ವೇತವ ರ್ಣತಾಳಿ, ಮೂಷಿಕವಾಹನನಾಗಿ ಮೂಷಿಕಾಸುರ ನನ್ನು ಸಂಹರಿಸಿ, 'ಕ್ಷಿಪ್ರಪ್ರದ' ಎಂದರೆ ಶೀಘ್ರ ಫಲ ವನ್ನು ಅನುಗ್ರಹಿಸುವ ಮಹಾಮಹಿಮನಾಗಿದ್ದಾನೆ. ಹೀಗೆ ಅನೇಕ ರೂಪಗಳಿಂದ ಪೂಜಿಸಲ್ಪಡುತ್ತಿರುವ ಗಣಪತಿಯ ಅರ್ಕಗಣಪತಿಯ ರೂಪವೂ ಒಂದು.

'ಅರ್ಕ' ಎಂದರೆ ಬ್ರಹ್ಮಾದಿ ದೇವತೆಗಳಿಂದ ಪೂಜಿತ ಎಂದು ಶ್ರೀ ಶಂಕರಾಚಾರ್ಯರು ತಮ್ಮ ವಿಷ್ಣು ಸಹಸ್ರನಾಮದ ಭಾಷ್ಯದಲ್ಲಿ ತಿಳಿಸಿದ್ದಾರೆ. ಸಾಮಾನ್ಯರಾದ ನಾವು 'ಅರ್ಕ' ಎಂಬುದು ಸಸ್ಯ ರಾಶಿಗೆ ಸೇರಿದ 'ಎಕ್ಕ' ಎಂಬ ಗಿಡವೆಂದು ತಿಳಿ ದರೆ ಸಾಕು. 'ಅರ್ಕ' ನೆಂದರೆ ಸೂರ್ಯನೆಂದೂ ಹೇಳುವರು. ಆದ್ದರಿಂದ ಅರ್ಕ -- ಎಕ್ಕದ ಗಿಡ ದಲ್ಲಿ ಸೂರ್ಯನ ಸನ್ನಿಧಾನ ವಿಶೇಷವಾಗಿದೆ. ಬಿಳಿ ಎಕ್ಕದ ಗಿಡದ ಬೇರಿನಿಂದ ತಯಾರಿಸಲ್ಪಟ್ಟ ಗಣ ಪತಿಯನ್ನು ೨೧ ದಿನಗಳು ಪೂಜಿಸಿದಲ್ಲಿ ಎಂತಹ ತೊಂದರೆಗಳೂ ನಿವಾರಣೆಯಾಗುವುದೆಂದು ತಂತ್ರ ದಲ್ಲಿ ಹೇಳಿದೆ.

ತಮಸ್ತೋಮಹಾರಂ ಜನಾಜ್ಞಾನಹಾರಂ
ತ್ರಯೀವೇದಸಾರಂ ಪರಬ್ರಹ್ಮಪಾರಂ
ಮುನಿಜ್ಞಾನಕಾರಂ ವಿದೂರೇ ವಿಕಾರಂ
ಸದಾ ಸೂರ್ಯರೂಪಂ ಗಣೇಶಂ ನಮಾಮಃ

--ಶ್ರೀ ಗಣೇಶಸ್ತವರಾಜದಲ್ಲಿ ಹೀಗೆ ಹೇಳಿದೆ. ಇದರ ಅರ್ಥ ಹೀಗಿದೆ. ಕತ್ತಲೆಯ ಸಮೂ ಹವನ್ನೇ ಕಳೆದು ಪ್ರಕಾಶಮಾಡಿಸಿ, ಭಕ್ತ ಜನ ಗಳ ಅಜ್ಞಾನ ಮಂಕುತನಗಳನ್ನು ಕಳೆದು, ಋಗ್, ಯಜುರ್, ಸಾಮವೇದಗಳ ಸಾರಭೂತನಾದ ಪರ ಬ್ರಹ್ಮನೂ, ಯೋಗಿಗಳಿಗೆ ಜ್ಞಾನದಾತನೂ ಆಗಿದ್ದು ಬಗೆಬಗೆಯ ರೂಪ ಧರಿಸಿದರೂ ಸದಾ ಪ್ರತ್ಯಕ್ಷ ಸಾಕ್ಷಿ ಯಾದ ಸೂರ್ಯರೂಪದಲ್ಲಿನ ಗಣೇಶನನ್ನು ನಮ ಸ್ಕರಿಸೋಣ.

ಕೆಂಪೇಗೌಡ ರಸ್ತೆಯಲ್ಲಿರುವ ಅರ್ಕಗಣಪತಿಯ ದೇವಾಲಯಕ್ಕೆ ಸುಮಾರು ಅರ್ಧ ಶತಮಾನದ ಇತಿ ಹಾಸವಿದೆ. ಅರ್ಕ ವೃಕ್ಷವಿದ್ದ ಸ್ಥಳದಲ್ಲಿ ಅರ್ಕ ಬುಡ ದಲ್ಲಿ ಭಾದ್ರಪದ ಶುದ್ಧ ಚತುರ್ಥಿಯಂದು ಎಕ್ಕೆ ಎಲೆ ಯಲ್ಲಿ ಗಣಪತಿಯ ಆಕಾರ ಮೂಡಿ ಬಂದ ಪವಾಡ ನಡೆಯಿತಂತೆ. ಭಕ್ತರೊಬ್ಬರಿಗೆ ಸ್ವಪ್ನ ಸೂಚನೆಯಾಗಿ ಬಾಲರೂಪಿನ ಗಣಪ ತನ್ನನ್ನು ಆ ಎಕ್ಕೆ ಮರದಡಿ ಪ್ರತಿಷ್ಠಾಪಿಸುವಂತೆ ಸೂಚಿಸಿದ. ಅಂತೆಯೇ ಗಣ ಪತಿಯನ್ನು ಅಲ್ಲಿ ಪ್ರತಿಷ್ಠಾಪಿಸಲು ಸಿದ್ಧತೆಗಳು ನಡೆ ದವು.

ಇದೇ ಅಲ್ಲದೆ ಅನೇಕ ಭಕ್ತರು ನವಗ್ರಹಗಳನ್ನು ಪ್ರತಿನಿಧಿಸುವ ವೃಕ್ಷಗಳ ಸಸಿಯನ್ನು ಅಲ್ಲಿ ನೆಟ್ಟು ವ್ಯವ ಸ್ಥಿತಗೊಳಿಸಿ ಬೆಳೆಸಿದರು. ಭಕ್ತ ವೃಂದದ ಕಾಣಿಕೆ ಮಾತ್ರದಿಂದಲೇ ಈ ನವಗ್ರಹ ವೃಕ್ಷಗಳ ದೇವಾ ಲಯ ಬೆಳೆಯಿತು. ಇವುಗಳ ನಡುವೆ ಗಣಪತಿಯ ಪ್ರತಿಷ್ಠಾಪನೆ ಯಾಯಿತು.



ಇಲ್ಲಿ ಅರ್ಕಗಿಡವ ಬುಡದಲ್ಲಿ ಪ್ರತಿಷ್ಠಾಪಿತನಾಗಿರುವ ಗಣಪತಿಯು ಸಾಲಿಗ್ರಾಮ ಶಿಲೆಯಲ್ಲಿ ನಿರ್ಮಿತವಾಗಿದ್ದು, ಮೇಲಿನ ಎರಡು ಹಸ್ತಗಳಲ್ಲಿ ಪಾಶ, ಅಂಕುಶ, ಹಾಗೂ ಕೆಳಗಿನ ಎರಡು ಹಸ್ತಗಳಲ್ಲಿ ಒಂದು ಅಭಯ ಹಸ್ತವಾದರೆ ಮತ್ತೊಂದರಲ್ಲಿ ಆತ ಮೋದಕ ಧರಿಸಿರುವನು. ಸೂಕ್ಷ್ಮನೇತ್ರಗಳು, ಅಗಲವಾದಕಿವಿಗಳು, ಪಾಶ, ಅಂಕುಶ, ಅಭಯ, ಮೋದಕ, ಲಂಬೋದರ, ನಾಗಪಾಶದಿಂದ ಕೂಡಿದ ಗಣಪತಿಯ ಒಂದೊಂದೂ ಒಂದೊಂದು ವಿಶೇಷ ಸೂಚನೆ ಭಕ್ತರಿಗೆ ನೀಡಿ ಮೋದ ನೀಡುವಂತಿದೆ.

ಅರ್ಕೇ ಗಣಪತಿರ್ಯತ್ರ
ಪೂಜ್ಯತೇऽತ್ಯಂತ ಶ್ರದ್ಧಯಾ
ನ ತತ್ರ ಕಿಂಚಿದಪ್ರಾಪ್ಯಂ
ಸರ್ವಃ ಸುಖ ಮಿಹೇಧತೇ

--ಅರ್ಕ ಸನ್ನಿಧಾನದಲ್ಲಿ ಶ್ರದ್ಧಾ ಭಕ್ತಿಗಳಿಂದ ಯಾರು ಪೂಜಿಸುವರೋ ಅವರಿಗೆ ದೊರೆಯದೇ ಇರುವ ಒಳ್ಳೆಯ ಫಲಗಳೇ ಇಲ್ಲ. ಅವರೆಲ್ಲರೂ ಸುಖವನ್ನೇ ಹೊಂದುವರು.

ಅರ್ಕ ಮಹಾಗಣಪತಿಯ ಎಡಭಾಗಕ್ಕೆ ಬಗಳಾಂಬ ದೇವಿಯ ಸುಂದರ ವಿಗ್ರಹ ಮಲಗಿದ ಭಂಗಿಯಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದೆ. ಬಗಳಾಂಬ ದೇವಿ--ಮೂಲ ಪ್ರಕೃತಿಯ ರೂಪ. ದೇವಿ ಮಹಾತ್ಮೆಯ ಪ್ರಥಮ ಚರಿತ್ರೆಯಲ್ಲಿ ಹೀಗೆ ಹೇಳಿದೆ--

ತುಷ್ಟಾವ ಯೋಗ ನಿದ್ರಾಂ
ತಾಮೇಕಾಗ್ರ ಹೃದಯಃ ಸ್ಥಿತಃ
ವಿಬೋಧನಾರ್ಥಾಯ
ಹರೇರ್ಹರಿ ನೇತ್ರ ಕೃತಾಲಯಾಮ್

--ಪ್ರಜಾಪತಿಯಾದ ಬ್ರಹ್ಮನು ಮಧು--ಕೈಟಭರನ್ನು ಸಂಹರಿಸಲು ನಿದ್ರಿಸುತ್ತಿದ್ದ ಶ್ರೀಹರಿಯನ್ನು ಎಚ್ಚರಗೊಳಿಸಲು ಆತನ ಕಣ್ಣುಗಳಲ್ಲಿದ್ದ ಯೋಗನಿದ್ರೆಯನ್ನು ಏಕಾಗ್ರಚಿತ್ತದಿಂದ ಸ್ತೋತ್ರ ಮಾಡಿದನು.

ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣ ಭೂತಳಾದ ಯೋಗ ಮಾಯೆಯ ವರ್ಣನೆ ಹೀಗಿದೆ;

ವಿಸೃಷ್ಟೌ ಸೃಷ್ಟಿರೂಪಾ ತ್ವಂ
ಸ್ಥಿತಿರೂಪಾ ಚ ಪಾಲನೇ
ತಥಾ ಸಂಹೃತಿರೂಪಾಂऽತೇ
ಜಗತೋऽಸ್ಯ ಜಗನ್ಮಯೇ

--ಬ್ರಹ್ಮನು 'ಹೇ ವಿಶ್ವವ್ಯಾಪ್ತಳೇ! ಸೃಷ್ಟಿಯ ಕಾಲದಲ್ಲಿ ಸೃಷ್ಟಿಶಕ್ತಿರೂಪಳು ಎಂದರೆ ಬ್ರಹ್ಮಶಕ್ತಿ, ಪಾಲನಾ ಸಮಯದಲ್ಲಿ ಸ್ಥಿತಿರೂಪಳು ಎಂದರೆ ವಿಷ್ಣುಶಕ್ತಿ ಹಾಗೂ ಜಗತ್ತಿನ ಅಂತ್ಯಕಾಲದಲ್ಲಿ ಸಂಹಾರ ಶಕ್ತಿರೂಪಳು ಎಂದರೆ ಶಿವಶಕ್ತಿ ಆಗಿದ್ದೀಯೆ' ಎಂದು ಪ್ರಾರ್ಥಿಸುತ್ತಾನೆ.

ಹೀಗೆ ತ್ರಿಮೂರ್ತಿಗಳಿಗೆ ಅವರವರ ಕರ್ತವ್ಯಗಳನ್ನು ಮಾಡಲು ಸ್ಫೂರ್ತಿ ನೀಡುವ ಯೋಗ ಮಾಯೆಯನ್ನೇ ದೇವೀ ರಹಸ್ಯದಲ್ಲಿ ಬಗಳಾಂಬ ಎಂದು ವರ್ಣಿಸಲಾಗಿದೆ. ಅರ್ಕಗಣಪನ ಪಕ್ಕದಲ್ಲಿ ಯೋಗ ನಿದ್ರೆಯಲ್ಲಿ ಮಲಗಿರುವ ಭಂಗಿಯಲ್ಲಿನ ದೇವಿ ಪ್ರತಿಮೆ ಅದ್ಭುತವಾಗಿದೆ.

ಎರಡು ಹಸ್ತಗಳಲ್ಲಿ ಒಂದು ತಲೆಯ ಕೆಳಗೆ, ಮತ್ತೊಂದು ಕೈ ತೊಡೆಯ ಮೇಲಿದೆ. ತಲೆಯಡಿಯಲ್ಲಿರುವ ಎಡ ಹಸ್ತದಲ್ಲಿ ಮೂರು ಸುತ್ತಿನ, ಎಂಟು ದಳದ ಕಮಲದ ಮೇಲೆ ಎರಡು ಪಾದಗಳಿದ್ದು ಅದರ ಮೇಲೆ ಮುಕ್ತಿ ಮತ್ತು ಶಾಂತಿ ಎಂಬ ಲೇಖವಿದೆ.

ಇದು ಒಂದು ತಾತ್ವಿಕ ರಹಸ್ಯ, ಕಮಲವು ಆತ್ಮಜ್ಞಾನದ ಸಂಕೇತ, ಸತ್ವ, ರಜಸ್ಸು, ತಮಸ್ಸು -- ಈ

ಮೂರೂ ಗುಣಗಳನ್ನು ಮೀರಿ ನಿಂತ ಪರವಸ್ತುಗಳೇ ಮುಕ್ತಿ ಹಾಗೂ ಶಾಂತಿ. ಅಂದರೆ ಇಹದಲ್ಲಿ ಶಾಂತಿ, ಪರದಲ್ಲಿ ಮುಕ್ತಿ. ಇದೇ ಮಾನವನ ಪರಮ ಧ್ಯೇಯವೆಂಬುದನ್ನು ಸೂಚಿಸುವಂತಿವೆ.

ಬಗಳಾಂಬದೇವಿಯ ಪಾದದ ಅಡಿಯಲ್ಲಿ ಒಂದು ಸುತ್ತಿನ ಅಷ್ಟದಳ ಪದ್ಮವಿದೆ. ಇದು ಅಣಿಮಾ, ಗರಿಮಾ, ಪ್ರಾಪ್ತಿ, ಪ್ರಾಕಾಮ್ಯ ಈಶಿತ್ವ, ವಶಿತ್ವ, ಮಹಿಮಾ, ಲಘಿಮಾ -- ಅಷ್ಟ ಸಿದ್ಧಿಗಳನ್ನು ಪ್ರತಿನಿಧಿಸುತ್ತದೆ. ಈ ಕಮಲದ ಪಕ್ಕದಲ್ಲಿ ಮೂರು ಕಮಲದ ಮೊಗ್ಗುಗಳಿವೆ.

ಈ ಮೊಗ್ಗುಗಳಲ್ಲಿ ಕುಳಿತ ಬ್ರಹ್ಮ, ವಿಷ್ಣು, ಮಹೇಶ್ವರರ ಪ್ರತಿಮೆಗಳಿವೆ. ಬ್ರಹ್ಮನ ಹಿಂಭಾಗದಲ್ಲಿ 'ನಾದ', ವಿಷ್ಣುವಿನ ಹಿಂಭಾಗದಲ್ಲಿ 'ಬಿಂದು', ಶಿವನ ಹಿಂಭಾಗದಲ್ಲಿ 'ಕಲಾ' ಎಂಬ ಲೇಖವನ್ನು ಕಾಣಬಹುದು. ಪೀಠದ ತುದಿಯಲ್ಲಿ ಕನ್ನಡದ ಅಕ್ಷರದ 'ಓಂ'ಕಾರವಿದೆ. ದೇವಿಯನ್ನು ತ್ರಿಮೂರ್ತಿಗಳು ಸೃಷ್ಟಿ, ಸ್ಥಿತಿ, ಲಯ ಕಾರಣಗಳಿಗಾಗಿ ಸ್ಫೂರ್ತಿಯನ್ನು ಬೇಡುತ್ತಿದ್ದಾರೆ. ಇದು ಈ ದೇವಾಲಯದಲ್ಲಿ ನೆಲೆಗೊಂಡಿರುವ ಶ್ರೀ ಬಗಳಾಂಬ ದೇವಿಯ ಸುಂದರ ರೂಪಗುಣವಾಗಿದೆ.

ಜಗತ್ತಿನ ಅಂತ್ಯಕಾಲದಲ್ಲಿ ಎಲ್ಲವೂ ಸ್ತಬ್ಧವಾಗಿದ್ದಾಗ ಮತ್ತೆ ಸೃಷ್ಟಿಗೆ ಪ್ರಚೋದನೆ ನೀಡುವವಳು ಈಕೆಯೇ, ದುರ್ಗಾ ಸಪ್ತಶತಿಯಲ್ಲಿ--

ಯಚ್ಚ ಕಿಂಚಿತ್ಕ್ವಚಿದ್ವಸ್ತು
ಸದಸದ್ವಾಖಿಲಾತ್ಮಿಕೇ
ತಸ್ಯ ಸರ್ವಸ್ಯ ಯಾ ಶಕ್ತಿಃ
ಸಾ ತ್ವಂ ಕಿಂ ಸ್ತೂಯಸೇ ಮಯಾ

ಯಯಾತ್ವಯಾ ಜಗತ್ಸ್ರಷ್ಟಾ
ಜಗತ್ಪಾತ್ಯತ್ತಿ ಯೋ ಜಗತ್
ಸೋಽಪಿ ನಿದ್ರಾವಶಂ ನೀತಃ
ಕಸ್ತ್ವಾಂ ಸ್ತೋತುಮಿಹೇಶ್ವರಃ

--ಚೇತನ, ಜಡವಸ್ತುಗಳು, ಎಲ್ಲಿದ್ದರ ಶಕ್ತಿಯೂ ಈ ಯೋಗ ಮಾಯೆಯೇ ಆಗಿದೆ. ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವ ಪರಮಾತ್ಮನೂ ಸಹ ಈ ಯೋಗ ನಿದ್ರಾವಶನಾಗಿದ್ದಾನೆ ಎಂದ ಮೇಲೆ ಯಾರು ತಾನೇ ಆ ದೇವಿಯನ್ನು ಸ್ತುತಿಸದೇ ಇರಲು ಸಾಧ್ಯ?

ಇಂತಹ ಅಪರೂಪವಾದ ಹಾಗೂ ತತ್ವಾರ್ಥಗರ್ಭಿತವಾದ ಬಗುಳಾಂಬ ದೇವಿಯ ಪ್ರತಿಮೆ ಇಡೀ ಭಾರತದಲ್ಲೇ ದರ್ಶನೀಯವಾದದ್ದಾಗಿದೆ. ನಮಗೆ ತಿಳಿದಂತೆ ಮಹಾರಾಷ್ಟ್ರದ 'ಆಲಂಪುರಿ' ಎಂಬಲ್ಲಿ 'ಜೋಗುಳಾಂಬ' ಎಂಬ ಹೆಸರಿನಿಂದ ಈ ದೇವಿಯನ್ನು ಪೂಜಿಸಲಾಗುತ್ತಿದೆ.

ಇನ್ನು ಅರ್ಕಗಣಪತಿಯ ಪಕ್ಕದಲ್ಲಿ ಬಗಳಾಂಬ ದೇವಿ, ಆಕೆಯ ಪಕ್ಕದಲ್ಲಿ ಶ್ರೀ ಚಕ್ರವನ್ನು ಪ್ರತಿಷ್ಠಾಪಿಸಲಾಗಿದೆ. ಶ್ರೀದೇವಿಯ ಯಂತ್ರರೂಪವಾದ ಶ್ರೀಚಕ್ರದ ಪೂಜೆಯನ್ನು ಮೊಟ್ಟಮೊದಲ ಬಾರಿಗೆ ಪ್ರಚುರಗೊಳಿಸಿದವರು ಶಂಕರಾಚಾರ್ಯರು.

ಇಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುವ ಶ್ರೀ ಚಕ್ರದಲ್ಲಿ ನಾಲ್ಕು ಶಿವಾತ್ಮಕ ಚಕ್ರಗಳು, ಐದು ಶಕ್ತಿ ಸ್ವರೂಪವಾದ ಚಕ್ರಗಳು ಇವೆ. ಈ ಒಂಭತ್ತು ಚಕ್ರಗಳು ನಮ್ಮ ಶರೀರದ ಒಂಭತ್ತು ಧಾತುಗಳನ್ನು ಪ್ರತಿನಿಧಿಸುತ್ತವೆ. ಚರ್ಮ, ರಕ್ತ, ಮಾಂಸ, ಮೇಧಸ್ಸು, ಮೂಳೆ -- ಇವು ಶಕ್ತಿ ಮೂಲಗಳು. ಮಜ್ಜ, ಶುಕ್ಲ, ಪ್ರಾಣ, ಜೀವ -- ಇವು ಶಿವ ಮೂಲಕವಾದ ಧಾತುಗಳು. ಹೀಗೆ ನಮ್ಮ ದೇಹವು ನವಧಾತು ಮಯವಾಗಿದೆ.

ವಿದ್ಯಾರಣ್ಯರು ಶ್ರೀಚಕ್ರವನ್ನು ಹಂಪೆಯಲ್ಲಿ ಸ್ಥಾಪಿಸಿ, ಪೂಜಿಸಿದ್ದರ ಫಲವಾಗಿ ವಿಜಯನಗರ ಸಾಮ್ರಾಜ್ಯ ವೈಭವದಿಂದ ಮೆರೆಯಿತು. ಇದೀಗ. ಕೊಲ್ಲೂರು, ಶ್ರೀರಂಗಪಟ್ಟಣದ ನಿಮಿಷಾಂಬ ದೇವಾಲಯ, ಶೃಂಗೇರಿ, ಹೊರನಾಡು ಹಾಗೂ ಇನ್ನೂ ಹಲವಾರು ಸ್ಥಳಗಳಲ್ಲಿ ಶ್ರೀಚಕ್ರ ಪ್ರತಿಷ್ಠಿತವಾಗಿದೆ. ಶ್ರೀಚಕ್ರದ ಪೂಜೆಯಿಂದ ಐಶ್ವರ್ಯ, ಆರೋಗ್ಯ ಅಭಿವೃದ್ಧಿಯಾಗುವುದು. ಅರ್ಕ ಮಹಾಗಣಪತಿಯ ದೇವಾಲಯದಲ್ಲಿ ಪ್ರತಿಷ್ಠಿತವಾಗಿರುವ ಶ್ರೀ ಚಕ್ರಕ್ಕೆ ಪ್ರತಿ ಶುಕ್ರವಾರದಂದು ವಿಶೇಷ ಪೂಜಾದಿಗಳು ನಡೆಯುತ್ತವೆ.

ಅರ್ಕ ಮಹಾಗಣಪತಿ, ಬಗಳಾಂಬದೇವಿ, ಶ್ರೀಚಕ್ರಗಳ ಸುತ್ತ ನವಗ್ರಹಗಳನ್ನು ಪ್ರತಿನಿಧಿಸುವ ವೃಕ್ಷಗಳ ಸಮೂಹ ನೋಡುವವರ ಕಣ್ಮನಸೆಳೆಯುತ್ತವೆ. ತಲೆಯೆತ್ತಿ ನೋಡಿದರೆ ಹಸಿರೇ ಹಸಿರು. ತಣ್ಣನೆಯ ಗಾಳಿ, ಭಕ್ತಿಭಾವ ತುಂಬಿ ನಿಲ್ಲುವ ಪ್ರಶಾಂತ ವಾತಾವರಣ ಅಲ್ಲಿದೆ. ಸೂರ್ಯಗ್ರಹದ ಪ್ರತಿನಿಧಿ ಅರ್ಕದಗಿಡ (ಎಕ್ಕೆಗಿಡ) ಚಂದ್ರಗ್ರಹದ ಪ್ರತಿನಿಧಿಯಾಗಿ ಪಲಾಶವೃಕ್ಷ, ಅಂಗಾರಕ ಅಥವಾ ಮಂಗಳ ಗ್ರಹದ ಪ್ರತಿನಿಧಿಯಾಗಿ ಕಗ್ಗಲೀ ವೃಕ್ಷ, ಇದನ್ನು ಖದಿರವೆಂದೂ ಕರೆಯುತ್ತಾರೆ, ಬುಧಗ್ರಹವನ್ನು ಪ್ರತಿನಿಧಿಸುವ ಉತ್ತರಾಣೀ ವೃಕ್ಷ, ಬೃಹಸ್ಪತಿ ಅಥವಾ ಗುರು ಗ್ರಹದ ಪ್ರತಿನಿಧಿಯಾದ ಅಶ್ವತ್ಥ ವೃಕ್ಷ, ಶುಕ್ರಗ್ರಹದ ಪ್ರತಿನಿಧಿಯಾದ ಔದಂಬರ ಅಥವಾ ಅತ್ತಿವೃಕ್ಷ, ಶನಿಗ್ರಹವನ್ನು ಪ್ರತಿನಿಧಿಸುವ ಶಮೀವೃಕ್ಷ ಅಥವಾ ಬನ್ನಿ ವೃಕ್ಷಗಳು ಇಲ್ಲಿ ನೆಲೆಗೊಂಡಿವೆ.

ಇವಿಷ್ಟೇ ಅಲ್ಲದೆ ರಾಹುಗ್ರಹದ ಪ್ರತಿನಿಧಿಯಾದ ಗರಿಕೆಯೊಡನೆ ಕೇತುಗ್ರಹವನ್ನು ಪ್ರತಿನಿಧಿಸುವ ದರ್ಭೆ ಹಾಗೂ ಬೇವು ಮತ್ತು ಬಿಲ್ವ ವೃಕ್ಷಗಳೂ ತಲೆಯೆತ್ತಿ ನಿಂತಿವೆ. ನವಗ್ರಹ ಶಾಂತಿ, ಹೋಮ ಹವನಾದಿಗಳನ್ನು ಮಾಡಿಸಲು ಶಕ್ತರಲ್ಲದ ಜನರಿಗೆ ಈ ಸ್ಥಳ ಕಾಮಧೇನುವಿನಂತೆ. ಈ ವೃಕ್ಷಗಳ ಪ್ರದಕ್ಷಿಣೆ, ನಮಸ್ಕಾರ ಮಾಡಿದಲ್ಲಿ ಸಮಫಲ ದೊರೆಯುವುದರಲ್ಲಿ ಸಂಶಯವಿಲ್ಲ.

ವಿಜಯದಶಮಿಯಲ್ಲಿ ಶಮೀವೃಕ್ಷ ಅಥವಾ ಬನ್ನಿವೃಕ್ಷಕ್ಕೆ ವಿಶೇಷ ಪೂಜೆ, ಗಣಪತಿಯ ಹಬ್ಬದಲ್ಲಿ ವಿಶೇಷ ಅಲಂಕಾರ, ಪೂಜೆ, ಅನ್ನದಾನ, ಮಾಘ ಮಾಸದಲ್ಲಿ ಅರ್ಕವೃಕ್ಷದ ಪೂಜೆ, ಕಾರ್ತೀಕ ದೀಪೋತ್ಸವ, ಭಕ್ತಜನರ ಅವಶ್ಯಕತೆಗೆ ತಕ್ಕಂತೆ ನವಗ್ರಹ ಹೋಮ - ಹೀಗೆ ಹಲವಾರು ಯೋಜನೆಗಳಿಂದ ಕೂಡಿ ನಡೆದು ಬರುತ್ತಿರುವ ಉನ್ನತಿಯ ಸ್ಥಾಯಿಯನ್ನು ಮುಟ್ಟಿರುವ ಈ ದೇವಾಲಯ ನಿಜಕ್ಕೂ ಒಂದು ಅದ್ಭುತ ಸಾಧನೆಯೇ ಸರಿ.

ಕಾಡನ್ನು ಉಳಿಸಿ, ಮರದೆಳೆಸಿ, ಗಿಡನೆಡಿ ಎಂಬ ಘೋಷಣೆಗಳು ಎಷ್ಟು ಮಟ್ಟಿಗೆ ಫಲಕಾರಿಯಾಗಿವೆ ಎಂದು ಅಂಕಿ ಅಂಶಗಳನ್ನು ಸರ್ಕಾರ ನೀಡಿ ಸಂತೃಪ್ತಿ ಪಟ್ಟುಕೊಳ್ಳಬಹುದು. ಆದರೆ ಯಾವ ಘೋಷಣೆಗೂ ಕಿವಿಗೊಡದೆ, ಹೆಚ್ಚು ಪ್ರಚಾರಕ್ಕೆ ಒಳಪಡದೆ ಗಂಭೀರವಾಗಿ ಬೃಹದಾಕಾರವಾಗಿ ಬೆಳೆಯುತ್ತಿರುವ ವೃಕ್ಷಗಳಿಂದ ಕೂಡಿದ ಈ ದೇವಾಲಯದ ನೋಟ, ಒಡನಾಟ ಶಾಂತಿ, ನೆಮ್ಮದಿಯನ್ನು ನೀಡುತ್ತದೆ.

ಬೆಂಗಳೂರಿನ ಕೆಂಪೇಗೌಡ ನಗರದ ಅಂಗಡಿ, ವ್ಯವಹಾರ, ಸಿನೇಮಾ ಇತರ ಉದ್ಯಮಗಳ ಅವಾಂತರದ ನಡುವೆ ನೆಮ್ಮದಿಯಿಂದ ಒಂದರಘಳಿಗೆ ಇಲ್ಲಿ ನಿಂತು ನೆಮ್ಮದಿಯಿಂದ ಉಸಿರಾಡಿ ಮುಂದೋಡುತ್ತಾರೆ. ಇದರಿಂದ ಅವರಿಗೆಷ್ಟೋ ತೃಪ್ತಿ.

ಇದೀಗ ದೇವಾಲಯದ ರಾಜಗೋಪುರ ನಿರ್ಮಾಣ ಹಂತದಲ್ಲಿದೆ. ವ್ಯವಸ್ಥಾಪಕರ ಮುತುವರ್ಜಿಯ ಫಲವಾಗಿ ಈ ವೃಕ್ಷಗಳಿಗೆ ಕಟ್ಟೆಯನ್ನು ಕಟ್ಟಿಸಲಾಗಿದೆ. ಆಗಮ ಬಲ್ಲ ಅರ್ಚಕ ವೃಂದದವರಿಂದ ವಿಧ್ಯುಕ್ತವಾದ ಪೂಜೆ ದೇವಾಲಯದ ಕಳೆಯನ್ನು ಹೆಚ್ಚಿಸಿದೆ. ಧರ್ಮದರ್ಶಿಗಳು ದೇವಾಲಯವನ್ನು ಮತ್ತಷ್ಟು ಸುಂದರವಾಗಿ, ಶುಭವಾಗಿರಸಲು ಹಲವಾರು ಯೋಜನೆ ಹಾಕಿಕೊಂಡಿದ್ದಾರ. ಇಲ್ಲಿನ ನಾಗರ ಕಲ್ಲುಗಳಿಗೂ ಸುಂದರ ಮಂಟಪಗಳಿವೆ.

ವೈದ್ಯಕೀಯ ಗುಣ, ನವಗ್ರಹಗಳ ಪ್ರತಿನಿಧಿಯಾದ ವೃಕ್ಷಗಳ ಈ ದೇವಾಲಯ ಬಹುಶಃ ಭಾರತದಲ್ಲೇ ಪ್ರಪ್ರಥಮವಾದದ್ದು ಎಂದರೆ ಆಶ್ಚರ್ಯವಿಲ್ಲ. ಇಂತಹ ಅಮೂಲ್ಯವಾದ ದೇವಾಲಯವನ್ನು ಪ್ರವಾಸಿಗಳು ದರ್ಶಿಸಲೇಬೇಕು, ಭಕ್ತಜನರು ಶ್ರದ್ಧಾರ್ದತೆಯಿಂದ ಕಾಪಾಡಿಕೊಳ್ಳು ಬರಲೇಬೇಕು.



# ನಾರಾಯಣ

---ಕಡಬಂ ದೊರೆಸ್ವಾಮಿ ಅಯ್ಯಂಗಾರ್.



ಪರಮಪದವನ್ನು ಸೇರುವ ಪ್ರಪನ್ನರಿಗೆ ಸಿದ್ಧಿಸುವ ಅರ್ಚಿರಾದಿ ಮಾರ್ಗ ಪ್ರಯಾಣದಲ್ಲಿ ಅತಿಥಿಸತ್ಕಾರಗಳ ರೀತಿಯನ್ನು ಶ್ರೀ ಶಠಾರಿ ಮುನಿವರ್ಯರಾದ ಶ್ರೀ ನಮ್ಮಾಳ್ವಾರವರು "ಶೂಳ್ ವಿಶುಂಬು" ಎಂಬ ಈ ಹತ್ತು ತಮಿಳು ಪದ್ಯಗಳಲ್ಲಿ ವಿವರಿಸಿದ್ದಾರೆ. ಅದರ ಕನ್ನಡ ಪದ್ಯಾನುವಾದವಿದು--

ಮುಗಿಲೋಳಿ ಮೊಳಗುತಿರೆ ಶುಭತೂರ್ಯ ಘೋಷವನು,
ನೀಳ್ಗಡಲ ನೀಚೆಗಳು ಕೈಚಾಚಿ ಕರೆಯುತಿವೆ,
ಜಗವೇಳು ಮೆರೆಯುತಿರೆ ಸದ್ವಸ್ತು ಸಂಪದವ,
ಎನ್ನಪ್ಪ ನಾರಣನ ಕಡು ನಂಟನಾಗಮನ, ವೀಕ್ಷಿಸುತ ೧

ಎನ್ನಪ್ಪ ನಾರಣನ ನಂಟನನು ಕಂಡುಬ್ಬಿ
ಗಗನದೊಳು ನೀರುಂಡ ಮೇಘಾಳಿ ಜಲಪೂರ್ಣ
ಕುಂಭಗಳ ತಂದಂತೆ ಘೂರ್ಣಿಪುದು ನೆಲೆಗಡಲು
ಉತ್ತುಂಗ ಗಿರಿಪಂಕ್ತಿ ತೋರಣಮೆನಲೆರಗುವರು, ಲೌಕಿಕರು ೨

ಧರೆಯನಂದಳೆದವನ ಮುಂದೆರಗಿ ಧೂಪವನು
ಪಿಡಿದೆತ್ತಿ ಪೂವಳೆಯ ಸುರಿಸುವರು ಸೂರಿಗಳು;
ವೈಕುಂಠಕಿದೆ ದಾರಿ ಬನ್ನಿರೈ ಎಂದಾರ್ದು
ಇಕ್ಕೆಲದ ಮೌನಿಗಳು ತೋರುವರು ಕೈಮುಗಿದು ಮಾರ್ಗವನು ೩

ಮಧು ನಿಬಿಡ ತುಳಸಿಮಾಲಾ ಮೌಳಿ ಮಾಧವನ
ಭಕ್ತಂಗೆ ಸುರರೆರಗಿ ತೋರುವರು ಬೀಡುಗಳ;
ಅಲೆಗಡಲಿಗೆಣೆಯೆನಿಸಿ ಮೊಳಗುವುವು ಭೇರಿಗಳು,
ಖರಕಿರಣರಳ್ಕರಿಂದಾದರಿಸಿ ನೀಡುವರು ಸ್ವಾಗತವ ೪

ಹರಿಭಕ್ತರಿವರೆಂದು ನಿರ್ಜರರು ಮುಂದೆರಗಿ
ಬಾಗಿಲೊಳು, ತಮ್ಮೆಡೆಗೆ ಬನ್ನಿರೈ ನೀವೆಂದು
ಗರುಡಾದಿ ಕಿನ್ನರರು ಪಾಡುವರು ಗೀತೆಗಳ,
ಅರ್ಪಿಸುವ ರಾರ್ಜಿಸಿದ ಸತ್ಕರ್ಮ ಫಲಗಳನು ವೈದಿಕರು ೫

ಎಲ್ಲೆಡೆಯ ನಾವರಿಸೆ ಧೂಪಗಳ ಪರಿಮಳವು
ಕಹಳೆಗಳು ಮೊಳಗುತಿರೆ ಶಂಖಗಳ ನೂದುವರು
ಚಕ್ರಧರ ವಿಷ್ಣು ಭಕ್ತರು ನೀವು ಕೈಗೊಳಿರಿ
ಪರಮಪದವಾಳ್ಕಿಕೆಯನೆಂದು ಕರೆವರು ಜ್ವಲ ನೇತ್ರೆಯರು ೬

ಶರ ಶಯನನೆಮ್ಮ ಮಣಿಮಕುಟ ಧಾರಿ ಕೇಶವನ
ಕುಂಭಪುರವಾಸಿ ಗೋಪಾಲಕನ ಮಡದಿಯರು
ಭಕ್ತಿಯಿಂ ತಾಡುತಿರೆ, ಮರುತರಷ್ಟ ವಸುಗಳು
ದನಿಗರಗಿ ನುತಿಸುವರು ವರವಿಷ್ಣು ಭಕ್ತನನು ಬಾರೆಂದು ೭

ಪರಿಗಣಿಸಿ ಪೀಳಿಗೆಯ ಹರಿಭಕ್ತ ನಿವನೆಂದು
ಮಕುಟ ಮಂಡಿತ ನಿತ್ಯಸೂರಿಗಳು ಪದಕೆರಗಿ
ಪುಗಿಸುವರು ಗುಡಿತೋರಣಂಗಳಿಂ ಕಂಗೊಳಿಪ
ಮಂಗಳಾಕಾರನಾ ಮಾಧವನ ವೈಕುಂಠ ಮಂದಿರಕೆ ೮

ವೈಕುಂಠವನು ಪೊಕ್ಕೊಡನೆ ದಿವ್ಯಸೂರಿಗಳು
ವೈಕುಂಠ ನಾಥಂಗೆ ಹರಿಭಕ್ತನಿವನೆಂದು
ಸ್ವಾಗತವ ನೀಡುವರು, ಪೊಗಳುವರು ನಿರ್ಜರರು
ಮೌನಿಗಳು ಮನುಜರಿಲ್ಲಿಗೈದುವುದೆ ಸೌಭಾಗ್ಯವೆಂದೆನುತ ೯

ನಾಂ ಗೆಯ್ದ ಪುಣ್ಯದಿಂದಿವರೈತಂದಿಹರೆಂದು
ವೇದವಿತ್ಸೂರಿಗಳು ತೊಳೆಯುವರು ಪಾದಗಳ;
ಸಿಂಧೂರ ಪೊಂಗೊಡ ಮೇಣ್ ಶುಭದೀಪಗಳ ನೆತ್ತಿ
ಚಂದ್ರಮುಖಿಯರೈತಂದು ಪಚರಿಸುವರು ನೀಡಿ ಸ್ವಾಗತವ ೧೦

ಶ್ರೀಪತಿಯೆ ಸಮ್ಮುಖದೊಳಿರುತಿರಲು ಮಹಾಮಣಿ
ಮಂಟಪ ದೊಳಾನಂದದಿಂ ಮೆರೆವ ಸೂರಿಗಳ
ನೆರವಿಯಲಿ ದಿವ್ಯಕುಸುಮೋದ್ಯಾನದಿಂದೆಸೆವ
ತಿರುನಗರಿಯಾಳ್ವಾರ ಪದ್ಯಗಳ ಬಲ್ಲವರೆ ಮುನಿವರರು ೧೧



# ತಿರುಪತಿಯ ಸುತ್ತ-ಮುತ್ತ

---ಶ್ರೀಮತಿ. ರುಕ್ಮಿಣಿಗಿರಿಮಾಜಿ.

ಬೆಂಗಳೂರಿನ ಉತ್ತರ ವಿಭಾಗದ ಅಖಿಲ ಭಾರತ ಮಾಧ್ವ ಮಹಾಮಂಡಲದ ಮಹಿಳಾ ಶಾಖೆಯವರು ತಿರುಪತಿಯ ಸುತ್ತಮುತ್ತಲ ಕೆಲವು ಮಹತ್ತರ ಪ್ರದೇಶಗಳನ್ನು ನೋಡಬೇಕೆಂದು ಒಂದು ಸಣ್ಣ ಪ್ರವಾಸವನ್ನೇರ್ಪಡಿಸುತ್ತಿರುವಾಗಲೇ, ನನಗೂ ಸಹಾ ದಾಸಸಾಹಿತ್ಯ ಪ್ರಾಜೆಕ್ಟಿನ, ಸಭೆಯಲ್ಲಿ ಭಾಗ ವಹಿಸಬೇಕೆಂದು ಪತ್ರಬಂದದ್ದು ನಮ್ಮಲ್ಲಿ ಇನ್ನೂ ಉತ್ಸಾಹವನ್ನು ಮೂಡಿಸಿತು. ಹೀಗಾಗಿ ಹನ್ನೆರಡು ಜನರ ಗುಂಪೊಂದು ಮೆಟಡರ್ ವ್ಯಾನ್ ಮಾಡಿಕೊಂಡು ಶ್ರೀನಿವಾಸನ ಜಯಘೋಷದೊಂದಿಗೆ ಬೆಂಗಳೂರನ್ನು ಬಿಟ್ಟೆವು.

ಸುಮಾರು ಎರಡು ಘಂಟೆಯ ಪ್ರಯಾಣದ ನಂತರ ನಮ್ಮ ತಂಡ ಕೋಲಾರ ಮುಳಬಾಗಿಲಿನ ನಡುವಿರುವ ತಂಬಳ್ಳಿಯನ್ನು ಸೇರಿತು. ಇಲ್ಲಿ ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ಮಾಧವ ತೀರ್ಥರಿಂದ ಸ್ಥಾಪಿಸಿಪಟ್ಟ ಒಂದು ಮಾಧ್ವಮಠವಿದೆ.

ಉತ್ತರ ಕರ್ನಾಟಕದವರಾದ ಶ್ರೀ ವಿಷ್ಣುಶಾಸ್ತ್ರಿಗಳು ಬ್ರಹ್ಮಚರ್ಯ ಆಶ್ರಮದಿವಲೇ ಶ್ರೀ ಮದಾನಂದತೀರ್ಥರಲ್ಲಿ ಸನ್ಯಾಸವನ್ನು ಸ್ವೀಕರಿಸಿ ಮಾಧವತೀರ್ಥರೆಂಬ ಅಭಿದಾನವನ್ನು ಪಡೆದು ಕ್ರಿ. ಶ. ೧೩೩೩ ರಲ್ಲಿ ಶ್ರೀ ನರಹರಿತೀರ್ಥರಿಂದ ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತರಾಗಿ ಹದಿನೇಳು ವರ್ಷಗಳ ಕಾಲ ದ್ವೈತ ಸಿದ್ಧಾಂತದ ಪ್ರಸಾರಕಾರ್ಯವನ್ನು ಮಾಡಿದರು. ನಾಲ್ಕು ವೇದಗಳಿಗೆ ಭಾಷ್ಯವನ್ನು ಬರೆದರು. ಕರ್ನಾಟಕ, ಆಂಧ್ರ ಮತ್ತು ಮಹಾರಾಷ್ಟ್ರಗಳಲ್ಲಿ ಮಧ್ವಮತವನ್ನು ಪ್ರಸಾರ ಮಾಡಿದರು. ನಂತರ ಭೀಮಾತೀರದ ಮಣೂರ ಗ್ರಾಮಕ್ಕೆ ವಯಮಾಡಿಸಿ ಅಲ್ಲಿನ ಗ್ರಾಮದ ಪ್ರಮುಖರ ಅಪೇಕ್ಷೆಯಂತೆ ದೊಡ್ಡ ವಿಶ್ವವಿದ್ಯಾಲಯವನ್ನೇ ತೆರೆದು ಅನೇಕ ಯುವಕರಿಗೆ ಮಧ್ವಸಿದ್ಧಾಂತವನ್ನು ಬೋಧಿಸಿದರು. ಆ ಯುವಕರು ದೊಡ್ಡ ವಿದ್ವಾಂಸರಾಗಿ ವೈಷ್ಣವಧರ್ಮದ ಪ್ರಸಾರವನ್ನು ಮಾಡಿದರು.

ಮಾಧವತೀರ್ಥರು ಗುರು ಮಧ್ವರಿಂದ ಯತ್ಯಾಶ್ರಮವನ್ನು ಪಡೆವಾಗ ಗುರುಗಳು ಅವರಿಗೆ ನಿತ್ಯ ಪೂಜೆಗಾಗಿ ವೀರರಾಮನ ಮೂರ್ತಿಯನ್ನು ಕೊಟ್ಟಿದ್ದರು. ಮತ್ತೆ ಮಾಧವ ತೀರ್ಥರು ನರಹರಿತೀರ್ಥರಿಂದ ಸರ್ವಜ್ಞ ಸಿಂಹಾಸನವನ್ನು ಆರೋಹಣ ಮಾಡುವಾಗ ಆ ಮೂರ್ತಿಯನ್ನು ತಮ್ಮ ಶಿಷ್ಯರಾದ ಮಧುಹರಿತೀರ್ಥರಿಗೆ ಕೊಟ್ಟು ತಮ್ಮ ಸಂಸ್ಥಾನವನ್ನು ಮುಂದುವರಿಸುವಂತೆ ಹೇಳಿದರು. ಅದು ಈಗ ಮಜ್ಜಿಗೆ ಹಳ್ಳಿ ಮಾಧವತೀರ್ಥರ ಮಠವೆಂದು ಪ್ರಸಿದ್ಧಿ ಪಡೆದು ಮುಳಬಾಗಿಲ ಬಳಿ ತಂಬಿಹಳ್ಳಿಯಲ್ಲಿದೆ. ಹೀಗೆ ನಾವು ಆ ಮಠದಲ್ಲಿಳಿದು ಈಗಿನ ಶ್ರೀಗಳಿಗೆ ನಮಸ್ಕರಿಸಿ ತಿರುಪತಿಯಿಂದ ಹಿಂದಿರುಗಿ ಬರುವಾಗ ಮತ್ತೆ ನಿಮ್ಮಲ್ಲಿಗೆ ಬರುತ್ತೇವೆಂದು ಹೇಳಿ ಮುಂದೆ ಹೊರಟೆವು.

ರಣಬಿಸಿಲು ರಾಚುತ್ತಿತ್ತು. ಕೊಂಡೊಯ್ದಿದ್ದ ನೀರೆಲ್ಲಾ ಖರ್ಚಾಗುತ್ತಿತ್ತು. ಮತ್ತೆ ಮುಳಬಾಗಿಲಿನಲ್ಲಿಳಿದು ನೃಸಿಂಹತೀರ್ಥದಲ್ಲಿ ಕೈಕಾಲು ಮೋರೆ ತೊಳೆದು ಶ್ರೀಪಾದರಾಜರ ಬೃಂದಾವನ, ಯೋಗಾನರಸಿಂಹ ಹಾಗೂ ಪ್ರಾಣದೇವರುಗಳನ್ನೂ ದರ್ಶನ ಮಾಡಿ ನಮಸ್ಕರಿಸಿ ಮುಂದೆ ಹೊರಟವು.

## ನಾರಾಯಣ ವನಂ :

ಪ್ರಯಾಣ ಮಾಡಿದಷ್ಟೂ ದಾರಿ ಉದ್ದವಾಗುತ್ತಲೇ ಇತ್ತು. ಈಗ ನಮ್ಮ ಗುರಿ ನಾರಾಯಣವನದತ್ತ. ಅದನ್ನು ನಮ್ಮಲ್ಲಿ ಯಾರೂ ನೋಡಿರಲಿಲ್ಲ. ಪುತ್ತೂರಿನಿಂದ ಆರುಕಿಲೋ ಮೀಟರ್ ದೂರದಲ್ಲಿದೆ. ಐತಿಹ್ಯಗಳಿಂದ ಅದು ಆಕಾಶರಾಜನ ಪಟ್ಟಣ. ಪದ್ಮಾವತೀದೇವಿ ಆಕಾಶರಾಜನಿಗೆ ದೊರೆತದ್ದು ಅಲ್ಲೇ. ಶ್ರೀನಿವಾಸ -- ಪದ್ಮಾವತಿಯವರ ವಿವಾಹವಾಗಿದ್ದೂ ಅಲ್ಲೆ ಎಂಬುದನ್ನು ಕೇಳಿದ್ದೆವು ಅಷ್ಟೆ. ಚಿತ್ತೂರಿನಲ್ಲಿ ವಿಚಾರಿಸಿದಾಗ ಅದು ಪುತ್ತೂರು ರಸ್ತೆಯಲ್ಲಿದೆ. ಚಿತ್ತೂರಿನಿಂದ ಸುಮಾರು ಮುವ್ವತ್ತು ಕಿಲೋಮೀಟರುಗಳಿರಬಹುದೆಂದು ತಿಳಿಯಿತು. ಚಿತ್ತೂರಿನಿಂದ ಸತತ ನಾಲ್ಕು ಗಂಟೆಗಳ ಪ್ರಯಾಣದ ನಂತರ ನಮ್ಮ ಶ್ರಮ ಸಾರ್ಥಕವಾಯಿತು.

ನಾರಾಯಣವನಂ ಒಂದು ಹಳ್ಳಿ, ಅಲ್ಲಿ ವೆಂಕಟೇಶ್ವರ ಸ್ವಾಮಿಯ ಭವ್ಯ ಮಂದಿರವಿದೆ. ಸ್ವಾಮಿಗುವಿಗ್ರಹ ದಿವ್ಯವೂ ಭವ್ಯವೂ ಆಗಿದೆ. ಸ್ವಾಮಿ ಕಂಕಣ ಧರಿಸಿದ್ದಾನೆ. ಸಾಲಿಗ್ರಾಮಗಳ ಮಾಲೆ ಹಾಕಿದ್ದಾನೆ. ಅವನು ಬೇಟೆಯಾಡಲು ಬಂದಾಗಿನ ಬಿಲ್ಲು ಬಾಣಗಳಿವೆ ಕೈಯಲ್ಲಿ. ಮಂದಿರದ ಮುಂದೆ ಬೃಹದಾಕಾರದ ಬೀಸುವ ಕಲ್ಲಿದೆ. ಬಹಳ ದೊಡ್ಡ ಸಾಣೆಯ ಕಲ್ಲುಗಳಿವೆ. ಅಲ್ಲಿಂದ ಎರಡು ಮೂರು ಕಿ.ಮೀ. ದೂರದಲ್ಲೇ ಆಕಾಶರಾಜನ ಅರಮನೆ ಮುಂತಾದುವುಗಳ ಅವಶೇಷವು ಈಚೆನವರೆಗೂ ಇತ್ತಂತೆ. ಈಗ ಅದನ್ನೆಲ್ಲಾ ನೆಲಸಮಮಾಡಿ ಅಲ್ಲಿದ್ದ ಈ ಬೀಸುವಕಲ್ಲು ಇತ್ಯಾದಿಗಳನ್ನು ತಂದು ಇಲ್ಲಿಟ್ಟಿದ್ದಾರಂತೆ. ಈ ಮಂದಿರದ ಪ್ರದಕ್ಷಿಣಾ ಪಥದಲ್ಲೇ ಪದ್ಮಾವತೀ ದೇವಿಯ ಮಂದಿರವಿದೆ. ಅಮ್ಮನದು ಬಲುಮುದ್ದಾದ ಮೂರ್ತಿ. ಇವುಗಳನ್ನೆಲ್ಲಾ ನೋಡಿಕೊಂಡು ಮುಂದೆ ತಿರುಪತಿಗೆ ಹೊರಟೆವು.

## ತಿರುಚಾನೂರು :

ತಿರುಪತಿ ಅಲ್ಲಿಂದ ಮುವ್ವತ್ತು ಕಿ.ಮೀ.ಗಳೆಂದರು. ಇನ್ನೇನು ತಿರುಪತಿಯ ಬಳಿ ಬರುವಾಗಲೇ ತಿರುಚಾನೂರು ದೊರಕಿತು. ಅಲ್ಲಿಳಿದು ಅಮ್ಮನಿಗೆ ಅರ್ಚನೆ ಮಾಡಿಸಿಕೊಂಡು ಬರಲು ಹೊರಟೆವು. ತಿರುಚಾನೂರು ತಿರುಪತಿಯಿಂದ ಹತ್ತು ನಿಮಿಷದ ಹಾದಿ. ಇಲ್ಲಿ ಅಲಮೇಲ್‌ಮಂಗೈ ಇದ್ದಾಳೆ. ಶ್ರೀನಿ



ನಾರಾಯಣವನಂ ಉತ್ಸವಮೂರ್ತಿ.


ಪದ್ಮಸರೋವರದೊಡನೆ ಶ್ರೀ ಪದ್ಮಾವತೀದೇವಾಲಯ

ವಾಸ ಬೆಟ್ಟದಿಂದ ಇಳಿದು ಬರುತ್ತಾನೆ ಈ ಲಕ್ಷ್ಮಿಯ ಬಳಿಗೆ ಎನ್ನುತ್ತಾರೆ. ಎಂತಲೇ ಸ್ವಾಮಿಸನ್ನಿಧಿಯಿಂದ ಬ್ರಹ್ಮೋತ್ಸವಕಾಲದಲ್ಲಿ ಅರಿಶಿನಕುಂಕುಮ, ರೇಷ್ಮೆ ವಸ್ತ್ರ ಈ ಸನ್ನಿಧಿಗೆ ಬರುತ್ತದೆ. ಇಲ್ಲಿಂದ ಆಶೀರ್ವಾದ ಪಡೆದು ತಿರುಪತಿಗೆ ಬಂದಾಗ ರಾತ್ರಿ ಒಂಭತ್ತು ಗಂಟೆಯಾಗಿತ್ತು. ರಾತ್ರಿ ಕಳೆದು ಬೆಳಗಾಗಿದ್ದೇ ತಡ ಕಪಿಲತೀರ್ಥಕ್ಕೆ ನಡೆದೆವು.

## ಕಪಿಲತೀರ್ಥ :

ಅರುಣೋದಯಕ್ಕೆ ಮುಂಚಿತವಾಗಿ ಕಪಿಲ ತೀರ್ಥದ ಸ್ನಾನ, ಮೈಮನಸ್ಸುಗಳಿಗೆ ಮುದ ತಂದಿತು. ಕಪಿಲಮುನಿ ಅರ್ಚಿಸಿದ ಕಪಿಲೇಶ್ವರ ಸ್ವಾಮಿ ಇಲ್ಲುಂಟು. ಕಪಿಲತೀರ್ಥವನ್ನು ಆಳ್ವಾರ್ ತೀರ್ಥ ಎಂದೂ ಕರೆಯುವುದುಂಟು. ಆದರೂ ಇಲ್ಲಿನ ಶಿವಲಿಂಗ ಪ್ರಸಿದ್ಧ. ಶಿವರಾತ್ರಿಯಲ್ಲಿ ಬ್ರಹ್ಮೋತ್ಸವ ನಡೆಯುತ್ತದೆ. ಅಲ್ಲಿಂದ ಸನಿಹದಲ್ಲೇ ಇರುವ ಶ್ರೀ ರಾಘವೇಂದ್ರಸ್ವಾಮಿಗಳ ಮಠದಲ್ಲಿ ಪಾರಣೆ ಮುಗಿಸಿ ಎಲ್ಲರೂ ಬೆಟ್ಟವೇರಿದರು.

## ಸುಪ್ರಭಾತ ದರ್ಶನ :

ನಾವು ಪ್ರತಿಸಲ ಬೆಟ್ಟಕ್ಕೆ ಹೋದಾಗಲೂ ಅಲ್ಲಿನವರು ನೀವು ಮಂಗಳವಾರ -- ಬುಧವಾರ ಬಂದರೆ ಸ್ವಾಮಿಯ ದರ್ಶನ ಸುಲಭವೆನ್ನುತ್ತಿದ್ದರು. ನಮಗೆ ಅನಾಯಾಸವಾಗಿ ಮಂಗಳ ವಾರ ಸಿಕ್ಕಿತ್ತು. ಆದರೆ ಅಂದು ಕೂಡಾ ಎಂದಿನಂತೆ ಕೂಟವೇ.

ಸುಪ್ರಭಾತದ ದರ್ಶನವು ಬೆಳಗಿನ ಝಾವ ಮೂರು ಗಂಟೆಗಿದ್ದುದರಿಂದ ಎಲ್ಲರೂ ಸ್ನಾನಾದಿಗಳನ್ನು ಮುಗಿಸಿ ಎರಡು ಗಂಟೆಗೇ ವೈಕುಂಠ ದ್ವಾರದಲ್ಲಿದ್ದೆವು. ಈಗಲೂ ಸಹಾ ಮುನ್ನೂರು, ನಾನ್ನೂರು ಮಂದಿಗೆ ಕಮ್ಮಿ ಇಲ್ಲದಂತೆ ಜನರಿದ್ದರು. ಸರಿಯಾಗಿ ಮೂರು ಗಂಟೆಗೆ ಪ್ರವೇಶ ದೊರಕಿತು. ಕಣ್ಣುಗಳಿಂದ ತಾನಾಗೇ ಆನಂದಬಾಷ್ಪ ಉದುರುತ್ತಿತ್ತು. ಮತ್ತೆ ಹೊರಗೆ ಬಂದು ವಿಮಾನ ಶ್ರೀನಿವಾಸನನ್ನು ನಮಸ್ಕರಿಸಿ, ಹೊರಬಂದೆವು.

## ಶ್ರೀನಿವಾಸ ಮಂಗಾಪುರ :

ಬೆಳಗ್ಗೆ ಎಂಟು ಗಂಟೆಗೇ ಬಿಸಿಲು. ನಾವು ನೇರವಾಗಿ ಶ್ರೀನಿವಾಸಮಂಗಾಪುರಕ್ಕೆ ಬಂದು ಶ್ರೀನಿವಾಸನ ಭವ್ಯ ಮೂರ್ತಿಯನ್ನು ಕಂಡೆವು. ಹಂತ ಹಂತವಾಗಿ ಬೆಳೆದು ಬಂದಿರುವ ಆ ಮಂದಿರದ ಅಭಿವೃದ್ಧಿ ಕಾರ್ಯಗಳು ಆಶ್ಚರ್ಯವನ್ನುಂಟುಮಾಡುತ್ತವೆ. ಒಂದೊಂದುಸಲ ನಾವು ಹಿಂದೆ ನೋಡಿದ್ದ ಮಂದಿರವು ಇದೇನೇ ಎನ್ನಿಸುತ್ತದೆ. ಶ್ರೀನಿವಾಸ ಮಂಗಾಪುರ ತಿರುಮಲೆಯಿಂದ ಸುಮಾರು ಎಂಟು ಕಿ.ಮೀ. ಆಗಬಹುದು. ಮುಖ್ಯ ರಸ್ತೆಯಿಂದ ಸ್ವಲ್ಪ ತಿರುಗಬೇಕಾಗುತ್ತದೆ. ಹತ್ತಿರದಲ್ಲೇ ಅಗಸ್ತ್ಯಾಶ್ರಮ. ಇಲ್ಲಿ ಅಗಸ್ತ್ಯೇಶ್ವರನ ಲಿಂಗವಿದೆ. ಅದಕ್ಕೆ ಆಗ ತಾನೇ ಅಭಿಷೇಕವಾಗುತ್ತಿತ್ತು. ಮಂದಿರದ ಎದುರಿಗೇ ವಿಶಾಲಪಾತ್ರದ ನದಿಯ ಹರಹು ಕಂಡಿತು. ಅಲ್ಲಿ ಭೀಮಾ, ಕಲ್ಯಾಣಿ ಮತ್ತು ಸುವರ್ಣಮುಖಿಗಳ ಸಂಗಮವಂತೆ -- ಆದರೆ ಒಂದು ಹನಿನೀರಾದರೂ ಇರಲಿಲ್ಲ. ಮಧ್ಯೆ ಒಂದು ಮಂಟಪದಲ್ಲಿ ದೊಡ್ಡದೊಂದು ಹೆಜ್ಜೆಯ ಗುರುತಿದೆ. ಮದುವೆಯಾದ ನಂತರ ಆರು ತಿಂಗಳು ಬೆಟ್ಟವನ್ನು ಹತ್ತಬಾರದೆಂಬ ನಿಯಮಕ್ಕೆ ಅನುಗುಣವಾಗಿ ಶ್ರೀನಿವಾಸನು ಪತ್ನಿಯೊಡನೆ ಆರು ತಿಂಗಳು ಅಗಸ್ತ್ಯ ಋಷಿಗಳ ಈ ಆಶ್ರಮದಲ್ಲಿ ಇದ್ದನೆನ್ನುವುದು ಒಂದು ಐತಿಹ್ಯ. ಹೆಜ್ಜೆ ಗುರುತು ಸ್ವಾಮಿಯದು ಎನ್ನುತ್ತಾರೆ. ಮತ್ತೆ ಅಲ್ಲೇ ಹರಿಹರನ ಮೂರ್ತಿಯೂ ಇದೆ. ಇದನ್ನೆಲ್ಲಾ ನೋಡಿಕೊಂಡು ಮತ್ತೆ ತಂಬಿಹಳ್ಳಿಯ ದಾರಿ ಹಿಡಿದೆವು.

ದಾರಿಯಲ್ಲಿ ಎಲ್ಲರೂ ಮಂತ್ರ ಮುಗ್ಧರಂತಿದ್ದರು. ಶ್ರೀನಿವಾಸನ ತಿಳಿಯಲಾಗದ ಆಟವನ್ನು ನೆನೆಸಿಕೊಳ್ಳುತ್ತಿದ್ದರು. ಎಲ್ಲರೂ ಶ್ರೀನಿವಾಸ ಕಲ್ಯಾಣವನ್ನು ಪಾರಾಯಣ ಮಾಡುವವರೇ. ಈಗ ಸ್ವಾಮಿಯ ಕೃಪೆಯಿಂದ ಅವನ ಕಲ್ಯಾಣಕ್ಕೆ ಸಂಬಂಧ ಪಟ್ಟ ಎಲ್ಲ ಸ್ಥಳವನ್ನೂ ಕಂಡಂತಾಗಿತ್ತು. ಶ್ರೀನಿವಾಸನ ಗರ್ಭ ಗುಡಿ -- ಹುತ್ತವಿದ್ದಜಾಗ -- ವರಾಹದೇವರ ದೇವ ಸ್ಥಾನ, ಸ್ವಾಮಿ ಪುಷ್ಕರಣಿ, ತಿರುಚಾನೂರು, ಆಕಾಶ ರಾಜ ಪಟ್ಟಣ, ಶ್ರೀನಿವಾಸ ಮಂಗಾಪುರ, ಅಗಸ್ತ್ಯೇಶ್ವರನ ಆವಾಸವಾದ ಅಗಸ್ತ್ಯಾಶ್ರಮ. ಹೀಗೆ ಎಲ್ಲವನ್ನು ನೋಡಲು ಅವಕಾಶವನ್ನೂ, ಅನುಕೂಲವನ್ನೂ ಒದಗಿಸಿಕೊಟ್ಟ ಸ್ವಾಮಿಗೆ ನಾವು ಎಷ್ಟು ಕೃತಜ್ಞರಾಗಿದ್ದರೂ ಸಾಲದು.

ಮುಂದೆ ನಾವು ತಂಬಿಹಳ್ಳಿಯನ್ನು ತಲುಪಿದಾಗ ಮಧ್ಯಾಹ್ನ ಒಂದು ಘಂಟೆ. ವೀರರಾಮನ ಪೂಜೆ ನಡೆಯುತ್ತಿತ್ತು. ಶತ ಶತಮಾನಗಳಿಂದ ಸತತವಾಗಿ ಪೂಜೆಗೊಳ್ಳುತ್ತಿರುವ ಅಂತಹ ದಿವ್ಯ ಮೂರ್ತಿಗಳ ದರ್ಶನವೇ ಭವತಾಪಹಾರಕವಾದದ್ದು. ಶ್ರೀಗಳವರು ಸಮೀಚೀನವಾದ ಭೋಜನವನ್ನೇರ್ಪಡಿಸಿದ್ದರು. ವೀರರಾಮನ ನೈವೇದ್ಯಗೊಂಡ ಆ ಭೋಜನ ಅಮೃತೋಪಮವಾಗಿತ್ತು.

ಬೆಂಗಳೂರು ತಲುಪಿದಾಗ ಸಂಜೆ ಐದುಗಂಟೆ. ಮತ್ತೆ ಆ ವಾಹನಗಳು, ದಟ್ಟ ಜನಸಂದಣಿ, ಭೂವೈಕುಂಠದಿಂದ ಮತ್ತೆ ಗಲಭೆಯ ವಾತಾವರಣಕ್ಕೆ ಹಿಂದಿರುಗಿದ್ದೆವು. ಆದರೆ ಒಂದು ಹೊಸ ಹುಟ್ಟನ್ನೇ ಪಡೆದಿದ್ದೆವು.




ಶ್ರೀನಿವಾಸ ಮಂಗಾಪುರದ ಆಲಯ ಮಹಾದ್ವಾರ

# ಕವಿ ಕಂಡ ಬ್ರಹ್ಮೋತ್ಸವ

ದಿ|| ಬ. ನ. ಗುಂಡೂರಾವ್.

ಶತ ಶತಮಾನಗಳಿಂದ, ಭಕ್ತಕೋಟಿಯ ಆಪತ್ಬ ಖನಾಗಿ, ಆಪನ್ನಿವಾರಕನಾಗಿ, ಇಷ್ಟಾರ್ಥ ದಾಯಕ ನಾಗಿ ಮೆರೆಯುತ್ತಿರುವ ಶೇಷಾದ್ರಿನಿಲಯ ಶ್ರೀನಿವಾ ಸನಿಗೆ ನಿತ್ಯೋತ್ಸವ ನಡೆಯುತ್ತಿರುತ್ತದೆ. ಶ್ರಿಯಃಪತಿ ವೇಂಕಟೇಶನ ವೈಭವ--ಮಹಿಮೆ ಎರಡೂ ಕಲ್ಪ ನೆಗೂ -- ಮಾತಿಗೂ ಎಟುಕದ ಅಲೌಕಿಕ ಸಂಗ ತಿಗಳು. ಈ ಕರುಣಾಲವಾಲನನ್ನು ಕೊಂಡಾಡದ ಕವಿಗಳೇ ಇಲ್ಲ, ವಾಗ್ಗೇಯಕಾರರೇ ಇಲ್ಲ.

ಕವಿ ಎಂಬ ಮಾತು ಬಹು ಗಂಭೀರ ಹಾಗೂ ವ್ಯಾಪಕ ಅರ್ಥವನ್ನು ಪಡೆದಿದೆ ವಾಗ್ಗೇಯಕಾರ ಶಿರೋಮಣಿಗಳಾದ ಅನ್ನಮಾಚಾರ್ಯರಿಗಂತೂ ತಿರುಪತಿ ವೇಂಕಟೇಶನೆಂದರೆ ಸಾಕು -- ಮೈಯು ಬ್ಬಿಹೋಗುತ್ತದೆ. ಕಲ್ಪನೆ ಗರಿಗೆದರಿ ಮುಗಿಲೆತ್ತ ರಕ್ಕೇರುತ್ತದೆ. ಸಂಗೀತರಸಧಾರೆ ತಾನೇ ತಾನಾಗಿ ಪ್ರವಹಿಸುತ್ತದೆ. ಶ್ರೀನಿವಾಸ ಅನ್ನಮಯ್ಯನ ಆರಾ ಧ್ಯದೈವ. ಕನ್ನಡದ ವಾಗ್ಗೇಯಕಾರರಲ್ಲಿ ಅಗ್ರಮಾನ್ಯ ರಾದ, ಕರ್ನಾಟಕ ಸಂಗೀತ ಸಂಪ್ರದಾಯದ ಆದ್ಯಪ್ರ ವರ್ತಕರಾದ ಪುರಂದರದಾಸರು ಶ್ರೀ ವೇಂಕಟೇಶನ ವೈಭವವನ್ನು ನೂರಾರು ಗೀತೆಗಳಲ್ಲಿ ಹಾಡಿಹೊ ಗಳಿದ್ದಾರೆ. ಒಂದೊಂದು ಗೀತೆಯಲ್ಲಿ ಸ್ವಾಮಿಯ ಒಂದೊಂದು ವೈಭವವನ್ನು ಒಂದೊಂದು ಮಹತ್ವ ವನ್ನು ಬಣ್ಣಿಸಿರುವುದುಂಟು.



ದೊಡ್ಡ ಶೇಷವಾಹನ

ಬ್ರಹ್ಮಾದಿ ದೇವತೆಗಳು ಯಾವ ಕೃಪಾಳುವಿನ ಪಾದ ದರ್ಶನಕ್ಕೆ ಹಾತೊರೆದು ಕಾದಿರುತ್ತಾರೆ -- ಆ ಪರಬ್ರಹ್ಮವಸ್ತುವೇ -- ಸಪ್ತಗಿರೀಶ ಶ್ರೀನಿವಾಸ. ಕಲಿ ಯುಗದ ವೈಕುಂಠವೆಂದೇ ಪ್ರಸಿದ್ಧವಾಗಿರುವ ತಿರು ಪತಿ ಭಾರತೀಯರ ಶ್ರದ್ಧಾಕೇಂದ್ರ, ಸ್ವಾಮಿಗೆ ಪ್ರತಿ ವರ್ಷ ನಡೆಯುವ -- ಬ್ರಹ್ಮೋತ್ಸವಕ್ಕೆ ಭವ್ಯ ಇತಿಹಾ ಸವಿದೆ. ವಿಜಯನಗರ ಸಾಮ್ರಾಜ್ಯದ ಘನ ಚಕ್ರವರ್ತಿ ಗಳು ಈ ಶ್ರೀನಿವಾಸನ ಸೇವೆ ಮಾಡಿದ್ದಾರೆ. ದರ್ಶನ ಮಾಡಿ ಧನ್ಯವಾಗಿದ್ದಾರೆ. ಬ್ರಹ್ಮೋತ್ಸವ ಕೈಂಕರ್ಯ ಸಲ್ಲಿಸಿದ್ದಾರೆ.

ಈ ಬ್ರಹ್ಮೋತ್ಸವವನ್ನು ಬ್ರಹ್ಮದೇವನೇ ಪ್ರಾರಂ ಭಿಸಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ -- ಎನ್ನುವುದಕ್ಕೆ ಅನೇಕ ಆಧಾರಗಳಿವೆ. ಕೋಟಿ ಕೋಟಿ ದೇವತಾ ಸಮೂಹ ಈ ಬ್ರಹ್ಮೋತ್ಸವ ಸಂದರ್ಭ ದಲ್ಲಿ ಸಪ್ತಗಿರಿಗೆ -- ಸ್ವಾಮಿ ಸನ್ನಿಧಿಗೆ -- ಆಗಮಿ ಸುತ್ತದೆಂದು ಪೌರಾಣಿಕ ಅಭಿಮತ. ಈ ಉತ್ಸವ ಸಾಧಾರಣವಾಗಿ ನವರಾತ್ರಿಯ ಸಂದರ್ಭದಲ್ಲಿ ನಡೆ ಯುತ್ತದೆ. ಈ ಬ್ರಹ್ಮೋತ್ಸವ ದರ್ಶನ ಸಾಕ್ಷಾತ್ ವೈಕುಂಠ ದರ್ಶನ -- ಎಂದರೆ ಅತಿಶಯೋಕ್ತಿಯಾಗ ಲಾರದು. ಲಕ್ಷಲಕ್ಷ ಭಕ್ತರು ಗೋವಿಂದನಾಮ ಸ್ಮರಣೆ ಮಾಡುತ್ತ ಮೈಮರೆಯುತ್ತಾರೆ. ಭಾರತದ ವಿವಿಧ ಭಾಗಗಳಿಂದ ಬರುವ ಸಂಗೀತ ವಿದ್ವನ್ಮಣಿ ಗಳು ನಾದಸುಧೆಯನ್ನೇ ಹರಿಸುತ್ತಾರೆ. ಭಕ್ತಿ ಭಾವ ಸಮ್ಮಿಶ್ರಿತ, ಸುರಗಂಗಾ ಸದೃಶ, ಸಂಗೀತ ರಸಧಾ ರೆಯಿಂದ ಶ್ರೋತೃಗಳ ಹೃನ್ಮನಗಳು ರಸಾರ್ದ್ರವಾ ಗುತ್ತವೆ. ನಿತ್ಯವೂ ನಡೆಯುವ ಉತ್ಸವಗಳಂತೂ ನಯನ ಮನೋಹರ.

ಬ್ರಹ್ಮೋತ್ಸವ ವೈಭವವನ್ನು, ವಾಗ್ಗೇಯಕಾರ ಶಿರೋಮಣಿ ಪುರಂದರದಾಸರು, ಮನೋಜ್ಞವಾದ ಒಂದು ಕೀರ್ತನೆಯಲ್ಲಿ, ತಮ್ಮ ಚಿತ್ರೋಪಮ ಭಾಷೆ ಯಲ್ಲಿ -- ಕಣ್ಣಿಗೆ ಕಟ್ಟುವಂತೆ -- ಬಣ್ಣಿಸಿದ್ದಾರೆ. ಈ ಕೀರ್ತನೆ ಮಧ್ಯಮಾವತಿ ರಾಗದಲ್ಲಿದೆ.

ದ್ವಾರ ಪಾಲಕರಾದ ಜಯವಿಜಯರು ಸ್ವಾಮಿ ಸೇವೆಗೆ ಸದಾಕಾಲವೂ ಕಟಿಬದ್ಧರಾಗಿದ್ದಾರೆ. ಸನ ಕಾದಿ ಮುನಿಬೃಂದ ಸ್ವಾಮಿ ದರ್ಶನಕ್ಕೆ ವಿನಮ್ರ ಭಕ್ತಿ ಭಾವದಿಂದ ಕಾದುನಿಂತಿದೆ. ತಿರುಪತಿ ದೇವಾಲಯ ಸುರನಿಕರದಿಂದ ತುಂಬಿಹೋಗಿದೆ.

ಪದುಮನಾಭ -- ಪರಮಪುರುಷ,
ಪರಂಜ್ಯೋತಿಸ್ವರೂಪ
ವಿದುರವಂದ್ಯ -- ವಿಮಲ ಚರಿತ
ವಿಹಂಗ ಅಧಿರೋಹಣ
ಉದಧಿವಾಸ -- ಉರಗಶಯನ
ಉನ್ನತೋನ್ನತ ಮಹಿಮಾ

ಎಂಬ ಘೋಷಣೆಗಳು ಮುಗಿಲು ಮುಟ್ಟುತ್ತವೆ.

ಶ್ರೀನಿವಾಸ ಈ ಗಿರಿಸಾನುವಿನಲ್ಲಿ ಬಂದು ನಿಂತ ದ್ದೇಕೆ?

ಎಲ್ಲ ಭಕುತರಭೀಷ್ಟ ಕೊಡುವುದಕ್ಕೆಂದೇ ನಿಜ ಧಾಮವನ್ನು ಪರಿತ್ಯಜಿಸಿ ಶೇಷಾದ್ರಿಯಲ್ಲಿ ಬಂದು ನಿಂತಿದ್ದಾನೆ. ಶೃಂಗಾರ ನಿಧಿಯ ಅಂಗಪ್ರತ್ಯಂಗ ಗಳಲ್ಲಿ ಆಣಿಮುತ್ತಿನಾಭರಣಗಳು ಝಗಝಗಿಸು



ಕಲ್ಪವೃಕ್ಷವಾಹನ



ಗರುಡವಾಹನ

ನಿನ್ನ ದಿವ್ಯ ಮೂರುತಿಯ ಕಣ್ಣು ದಣಿಯೆ ನೋಡಿ.
ಧನ್ಯನಾದೆನೊ ಧರೆಯೊಳು ||ಪ||

ಇನ್ನು ಈ ಭವಭಯಕೆ ಅಂಜಲೇತಕೊ
ಚೆನ್ನ ಸಿರಿ ವೆಂಕಟೇಶ ಶ್ರೀಶ ||ಅ.ಪ.||

..........................................................

ಶಿರದಲ್ಲಿ ರವಿಕೋಟಿ ತೇಜದಿಂದೆಸೆವಂಥ ವರ ಕಿರೀಟವು ಕುಂಡಲ
ಕೊರಳೊಳಿಹ ಸರಿಗೆ ವೈಜಯಂತಿಯ ಮಾಲೆ ಪರಿಪರಿಯ ಹಾರಗಳನು
ಉರದಿ ಶ್ರೀವತ್ಸವನು ಕರದಿ ಶಂಖಚಕ್ರಗಳು ವರನಾಭಿಮಾಣಿಕವನು
ನಿರುಪಮ ಮಣಿಖಚಿತ ಕಟಿಸೂತ್ರ ಪೀತಾಂಬರ ಚರಣದ್ವಯದಂದುಗೆಯನು ಇನ್ನು

..........................................................

--ಪುರಂದರದಾಸರು.

ತ್ರಿವೆ. ಕೋಟಿ ಮನ್ಮಥ ಲಾವಣ್ಯನಾದ ಈ ಶೃಂಗಾರ ಮೂರುತಿಯನ್ನು ಕಂಡು ಪುಲಕಿತರಾದ ಸದ್ಗುರು ತ್ಯಾಗರಾಜರು ಮೈಮರೆತು ಹಾಡಿದರು--

ಎವರನಿ ನಿರ್ಣಯಿಂಚೇದಿರಾ
ನಿನ್ನೆಟ್ಲಾ ರಾಧಿಂ ಚೇದಿರಾ?

ಶ್ರೀನಿವಾಸ--ನಿನ್ನನ್ನು ಯಾರೆಂದು ನಿರ್ಣಯಿಸುವುದು -- ಹೇಗೆ ಆರಾಧಿಸುವುದು! ಶಿವನೆಂದೇ -- ಮಾಧವನೆಂದೇ -- ಕಮಲಭವನೆಂದೇ -- ಸರ್ವಾತೀತ ಪರಬ್ರಹ್ಮವೆಂದೇ?

ಪುರಂದರರು ಹೇಳುತ್ತಾರೆ--

ಹೇಗೆ ಮೆಚ್ಚಿಸಲಿ -- ಅರ್ಚಿಸಲಿ -- ನಿನ್ನ
ನಾಗಶಯನನೆ ನಾರದ ವಂದ್ಯನೆ ದೇವಾ?
ವರಮಣಿ ಮಕುಟಮಸ್ತಕ
ಸುರವರ ಸನಕಾದಿ ವಂದಿತ ಪಾದಯುಗ
ಪೀತಾಂಬರ ದುಡಿಗೆಯಲಿ ರಂಜಿಸುವ ವಿಗ್ರಹ

ಇಂತಹ ದಿವ್ಯಮಂಗಳ ಮೂರುತಿ ಲೋಲ ಮಕರ ಕುಂಡಲಗಳಿಂದ ಸಜ್ಜಾಗಿ, ತುಂಗ ಚತುರ್ಭುಜಗಳಲ್ಲಿ ಶಂಖ ಚಕ್ರಾದಿಗಳನ್ನು ಧರಿಸಿ -- ಪೀತಾಂಬರದುಡಿಗೆಯುಟ್ಟು ರಾಜಬೀದಿಗಳಲ್ಲಿ ಮೆರವಣಿಗೆ ಹೊರಡುವ ಆ ಠೀಕು -- ಆ ಗಾಂಭೀರ್ಯ -- ಎಲ್ಲವೂ ರಾಜಯೋಗ್ಯ -- ವೈಭವಾನ್ವಿತ ದೇವಯೋಗ್ಯ.

ಭಾರತೀಯರ ಹೃದಯಾಂತರಾಳದಲ್ಲಿ ಭಕ್ತಿಯೆಂಬುದು ಗುಪ್ತಗಾಮಿನಿ ಪುಣ್ಯತರಂಗಿಣಿಯಂತೆ ನಿರಂತರ ಪ್ರವಹಿಸುವ ಜೀವನ ವಾಹಿನಿಯಾಗಿದೆ. ಅದರ ಪ್ರಕಟರೂಪವೇ ಹಬ್ಬ ಹರಿದಿನಗಳು, ಉತ್ಸವ ಮಹೋತ್ಸವಗಳು. ಈ ವೈಭವದ ಕೇಂದ್ರಬಿಂದು ಭಗವಂತ. ಆತನನ್ನು ನಾನಾರೂಪಗಳಲ್ಲಿ ನಮ್ಮವರು ಕಂಡಿದ್ದಾರೆ. ಆನಂದಾನುಭವ ಪಡೆದಿದ್ದಾರೆ. ಈ ಅನುಭೂತಿ ಕಾವ್ಯಗಳಾಗಿ ಬಂದಿದೆ. ಗೇಯಕವಿತೆಯಾಗಿ ಬಂದಿದೆ. ಸಂಗೀತ ಕೀರ್ತನೆಗಳಾಗಿ ಬಂದಿದೆ. ಭಾರತೀಯ ಸಾಹಿತ್ಯದಲ್ಲಿ ಭಕ್ತಿ ಅವಿಭಾಜ್ಯ ಅಂಗವಾಗಿರುವುದರಿಂದಲೇ ಅದು ಧಾರ್ಮಿಕ ಸಾಹಿತ್ಯವಾಗಿ -- ಓಜಸ್ವಿಯಾಗಿ, ತೇಜಸ್ಸಂಪನ್ನವಾಗಿ ಮೆರೆಯುತ್ತಿರುವುದು. ನಿತ್ಯನೂತನವಾದ ಜೀವನ ರಸಧಾರೆಯಾಗಿದೆ ಇಲ್ಲಿನ ಸಾಹಿತ್ಯ -- ಎಂದರೂ ತಪ್ಪಲ್ಲ. ಪುರಂದರ ದೃಷ್ಟಿಯಲ್ಲಿ ಶ್ರೀನಿವಾಸ ಯಾರು?

ವಿಧಿ ಭವಾದ್ಯರ ಪೊರೆವ ದಾತನು
ತುದಿ ಮೊದಲು ಮಧ್ಯಮ ವಿರಹಿತನು
ತ್ರಿದಶ ಪೂಜಿತ ತ್ರಿಭುವನೇಶ

ಶ್ರೀನಿವಾಸ ಬ್ರಹ್ಮೋತ್ಸವಕ್ಕೆ ಸಜ್ಜಾಗಿರುವ ಅಲಂಕಾರವೆಂತಹುದು?

ಪದಕ ಕೌಸ್ತುಭಧಾರ ಸರಿಗೇಯ ಕಂದರ
ಸುದರುಶನದುರುಧಾರ ಸುಂದರ ಮನೋಹರ

ಪದಯುಗದಿ ನೂಪುರ -- ಇಟ್ಟಿಹನು
ಸನ್ಮುನಿ ಹೃದಯಸ್ಥಿತ ಗಂಭೀರ --
ಬಹುದಾನಶೂರ
ಹಾರ ಮಕುಟಾಭರಣ ಕುಂಡಲ ಧಾರ
ಭುಜ ಕೇಯೂರ ಭೂಷಿತ
ಮಾರಪಿತ ಗುಣ ಮೋಹನಾಂಗ
ಚಾರು ಪೀತಾಂಬರಕಟಿ
ಕರವೀರ ಕಲ್ಹಾರಾದಿ ಹೂವಿನ
ಹಾರ ಕೊರಳೊಳು ಎಸೆಯುತಿರೆ
ವದನಾರವಿಂದನು ನಗುತ ನಲಿಯುತ
ಬಂದು ನಿಂದಿಹ ನೋಡಿ
ಸದುವಿಲಾಸದಿ ಸ್ವಾಮಿತೀರ್ಥದಿ ಉದಿಸುತಿರೆ
ಸಿರಿಮಹಿಳೆ ಸಹಿತದಿ
ಪದುಮನಾಭ ಪುರಂದರ ವಿಠಲ
ಪ್ರತಿ ವರುಷ ಬ್ರಹ್ಮೋತ್ಸವದಿ ಮೆರೆಯುತ
ಬಂದು ನಿಂದಿಹನೋಡಿ ಭೂತಳದಿ
ವೇಂಕಟ ಇಂದಿರೆಯ ಒಡಗೂಡಿ

ಶ್ರೀನಿವಾಸನ ಬ್ರಹ್ಮೋತ್ಸವ -- ಭಕ್ತಜನರ ಬ್ರಹ್ಮಾನಂದೋತ್ಸವ. ಶೇಷಾದ್ರಿಶೇಖರ ಪ್ರಭೋ ತವ ಸುಪ್ರಭಾತಂ -- ಎಂದು ಹಾಡುವ ನಾದ, ವೈಭವಕ್ಕೆ ಸ್ವಾಮಿ ಹೂವರಳಿದಂತೆ ಕಣ್ಣು ಬಿಡುತ್ತಾನೆ. ಆ ಕೃಪಾಕಟಾಕ್ಷ ಇಡೀ ವಿಶ್ವದ ಮೇಲೆ ಸಾಂದ್ರಚಂದ್ರಿಕೆಯಂತೆ ಹರಡುತ್ತದೆ. ಶ್ರೀಹರಿ ಶ್ರೀನಿವಾಸನ ನಿವಾಸಸ್ಥಾನ -- ಸಮಗ್ರ ಸೌಂದರ್ಯ ವೈಭವದ ಮೂಲಸ್ಥಾನ -- ಅದಿಗೋ -- ಅಲ್ಲಿದೆ -- ಎಂದು ಕೈ ಎತ್ತಿ ತೋರಿಸುತ್ತಾನೆ ಅನ್ನಮಾಚಾರ್ಯ, ಅಲ್ಲಿ ಆದಿಶೇಷ ತನ್ನ ಸಹಸ್ರ ಹೆಡೆಗಳಿಂದ ಕೊಡೆ ಹಿಡಿದಿದ್ದಾನೆ. ವೇಂಕಟಾಚಲವು ಬ್ರಹ್ಮಾದಿಗಳಿಗೂ ಪರಮ ಪಾವನ ಕ್ಷೇತ್ರ. ಅಸಂಖ್ಯಾತ ಋಷಿಮುನಿಗಳು ಸೇವೆ ಸಲ್ಲಿಸುವ ಕ್ಷೇತ್ರವಿದು. ಅಲ್ಲಿ -- ಅನತಿ ದೂರದಲ್ಲಿ ಕಾಣುತ್ತಿರುವುದೇ ಮೂಲಧನ -- ಪರಮಾತ್ಮನಾವಾಸಸ್ಥಾನ -- ಸುವರ್ಣಶಿಖರಗಳಿಂದ ರಾರಾಜಿಸುತ್ತಿದೆ. ಪಾವನಕೆ ಪಾವನಂ -- ಮಂಗಳಕೆ ಮಂಗಳಂ -- ಯಾವುದೋ ಆ ಪರಮಪೂಜ್ಯವಸ್ತು ಶ್ರೀ ವೇಂಕಟಾದ್ರಿಯಲ್ಲಿ ಬಂದು ನಿಂತಿದೆ. ಈ ಪುಣ್ಯಮೂರ್ತಿಗೆ ಬ್ರಹ್ಮೋತ್ಸವ ಕೈಂಕರ್ಯವೆಸಗಲು ಲಕ್ಷಲಕ್ಷ ಜನ ಕಟಿಬದ್ಧರಾಗಿ ನಿಂತಿದ್ದಾರೆ. ವೇದಘೋಷ -- ನಾದಘೋಷ -- ಭಕ್ತ ಹೃದಯದ ಗೋವಿಂದ ಘೋಷ ಮುಪ್ಪುರಿಗೊಂಡಿದೆ ಸ್ವಾಮಿ ಪುಷ್ಕರಿಣಿ ತೀರದಲ್ಲಿ ಶ್ರೀನಿವಾಸ ಬಿಜಯಮಾಡಿಸುವಾಗ.

ತಿರುಪತಿಯ ಬ್ರಹ್ಮೋತ್ಸವ ಜಗತ್ತಿನ ಮಹಾವೈಭವಗಳಲ್ಲಿ ಅಗ್ರಮಾನ್ಯವಾದದ್ದು. ಸಿದ್ಧವಾಕ್‌ಗಳಾದ ವಾಗ್ಗೇಯಕಾರ ಶಿರೋಮಣಿಗಳಲ್ಲದೆ ಇನ್ನಾರುತಾನೆ ಆ ವೈಭವವನ್ನು ಬಣ್ಣಿಸಬಲ್ಲರು. *



ರಥೋತ್ಸವ

ದಣಿಯ ನೋಡಿದೆನೊ ವೆಂಕಟನ ಮನ
ದಣಿಯ ನೋಡಿದೆ ಶಿಖಾಮಣಿಯ ನಿರ್ಮಲನ

ಕೇಸಕ್ಕಿ ಅನ್ನ ತಿಂಬವನ ಬಡ್ಡಿಕಾಸುಬಿಡದೆ ಹೊನ್ನ ಬಳಸಿಕೊಂಬವನ
ದೋಸೆ ಅನ್ನ ಮಾರಿಸುವನ ತನ್ನ ದಾಸರ ಮೇಳದಿ ಕುಣಿದಾಡುವವನ ||1||

ಗಂಟಿನೊಲ್ಲಿಯ ಹೊದ್ದಿಹನ ಹೊರಹೊಂಟು ಹೋಗಿ ಬೇಟೆಯಾಡುತಲಿಹನ
ಘಂಟೆ ನಾದಕೆ ಒಲಿಯುವನ ಭೂವೈಕುಂಠವಿದೆಂದು ಹಸ್ತವ ತೋರಿದವನ ||2||

ಬೆಟ್ಟ ದೊಳಗೆ ಇರುತಿಹನ ಮನಮುಟ್ಟಿ ಭಜಿಪ ಭಕ್ತರಿಗೊಲಿದವನ
ಕೊಟ್ಟ ವರವ ತಪ್ಪದವನ ಸೃಷ್ಟಿಗಧಿಕ ಪುರಂದರ ವಿಠಲನ ||3||

ಪುರಂದರದಾಸರು.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.

# ಸ್ವಾಮಿ ಚಿನ್ಮಯಾನಂದ

---ಎಸ್. ಉಮಾದೇವಿ.

ಕೇರಳದಲ್ಲಿ ಜನಿಸಿದ ಶ್ರೀ ಬಾಲಕೃಷ್ಣಮೆನನ್ ಆಂಗ್ಲಭಾಷೆಯಲ್ಲಿ ಎಂ.ಎ. ಮುಗಿಸಿ ಪತ್ರಿಕೋದ್ಯಮಿಯಾಗಿ ಕಾರ್ಯನಿರ್ವಹಿಸುತ್ತಾ ಹೃಷಿಕೇಶದ ಸ್ವಾಮಿ ಶಿವಾನಂದರ ಸಂಪರ್ಕಕ್ಕೆ ಬಂದು ಅವರಿಂದ ಸಂನ್ಯಾಸದೀಕ್ಷೆ ಪಡೆದು, ಉತ್ತರ ಕಾಶಿಯಲ್ಲಿದ್ದ ಸ್ವಾಮಿ ತಪೋವನರ ಪದತಲ ಸಾನ್ನಿಧ್ಯದಲ್ಲಿ ಕುಳಿತು ಜ್ಞಾನ ದೀಕ್ಷೆ ಪಡೆದು ಸ್ವಾಮಿ ಚಿನ್ಮಯಾನಂದರಾಗಿ ಜ್ಞಾನ ಗಂಗೆಯನ್ನು ಗೀತಾಜ್ಞಾನ ಯಜ್ಞಗಳ ಮೂಲಕ ಧರೆಗಿಳಿಸಿದ ಮಹಾನ್ ಚೇತನ -- ಇಂದು ನಮ್ಮಿಂದ ದೂರವಾಗಿದೆ. ಅವರಿಗೆ ೭೭ ವರ್ಷವಯಸ್ಸಾಗಿತ್ತು.

೧೯೫೧ ನೇ ಇಸವಿಯಿಂದ ೧೯೯೩ ರ ಜುಲೈ ೨೫ ರವರಿಗೆ ನಿರಂತರವಾಗಿ ವಿಶ್ವದ ಜನತೆಗೆ ಜ್ಞಾನ ಸಂದೇಶ ನೀಡಿದ ಧೀಮಂತ ಮೂರ್ತಿಗಳವರು. ೧೯೫೩ ರಲ್ಲಿ ಚಿನ್ಮಯಿಮಿಷನ್ ಭಕ್ತಾದಿಗಳ ಕೋರಿಕೆಯ ಮೇರೆಗೆ ಸ್ಥಾಪನೆಯಾಗಿ ಅದು ವಿಶ್ವವನ್ನೇ ವ್ಯಾಪಿಸಿತು.

ಗೀತಾಜ್ಞಾನ ಯಜ್ಞ :-- ೩೧--೧೨--೫೧ ರಂದು ಪೂನಾದಲ್ಲಿ ಪ್ರಾರಂಭವಾದ ಗೀತಾಜ್ಞಾನಯಜ್ಞದ ಕಾರ್ಯಕ್ರಮ ವಾಷಿಂಗ್‌ಟನ್ ನಲ್ಲಿ ೧೯೯೩ ಜುಲೈ ೧೯ ರಿಂದ ೨೫ ರವರೆಗೆ ನಿರಂತರವಾಗಿ ನಡೆಯಿತು.

ರಾಷ್ಟ್ರೀಯ ಗೀತಾಜ್ಞಾನ ಯಜ್ಞಗಳು :-- 15--4--72 ರಿಂದ ಪ್ರಾರಂಭವಾಗಿ ೨೫ ಕ್ಕೂ ಹೆಚ್ಚು ರಾಷ್ಟ್ರೀಯಗೀತಾಜ್ಞಾನ ಯಜ್ಞಗಳು ನಡೆದಿವೆ.

ಅಂತರರಾಷ್ಟ್ರೀಯ ಆಧ್ಯಾತ್ಮಿಕ ಶಿಬಿರ ಗೀತಾಜ್ಞಾನಯಜ್ಞ :-- ೨೪--೧೨--೮೩ ರಿಂದ ಈವರೆಗೆ ನಡೆಸಿಕೊಂಡು ಬಂದಿದ್ದರು.

ಪ್ರಪಂಚ ಪರ್ಯಟನೆ :-- ವಿಶ್ವದ ಅಸಂಖ್ಯಾತ ಸಾಧಕರಿಗೆ ಅಗತ್ಯವಾದ ಜ್ಞಾನಸಂದೇಶ ನೀಡಲು ಭಾರತ ದೇಶದ ಹಳ್ಳಿ, ಹಳ್ಳಿ, ಜಿಲ್ಲೆ, ಪಟ್ಟಣಗಳ ಉದ್ದಗಲಕ್ಕೆ ಸಂಚರಿಸಿದ ಪೂಜ್ಯರು ೭--೩--೬೫ ರಿಂದ ಪ್ರಪಂಚ ಪರ್ಯಟನೆ ಮಾಡಿ ಗೀತಾಸಂದೇಶಕ್ಕಾಗಿ ಬ್ಯಾಂಕಾಕ್ ನಗರದ ಮೂಲಕ ಆರಂಭಿಸಿ ಹಲವಾರು ಚಿನ್ಮಯ ಮಿಷನ್ ಕೇಂದ್ರಗಳನ್ನು ಪ್ರಪಂಚಾದ್ಯಂತ ಸ್ಥಾಪಿಸಿದರು, ಮತ್ತು ಅಲ್ಲೆಲ್ಲಾ ಜ್ಞಾನಯಜ್ಞ ನಡೆಸಿದರು. ಪ್ರಪಂಚದ ಮೂಲೆ ಮೂಲೆಗಳಲ್ಲೂ ಸನಾತನಧರ್ಮದ ಜ್ಞಾನಧಾರೆಯನ್ನು ಹರಿಸಿದರು.

ಹಿಂದೂಧರ್ಮದ ಸಾರವಾದ ಭಗವದ್ಗೀತೆ, ಉಪನಿಷತ್ತು ಮತ್ತು ಬ್ರಹ್ಮಸೂತ್ರಗಳ ಪ್ರಚಾರಕ್ಕಾಗಿ ೧೯೬೩ ರಲ್ಲಿ ಬಾಂಬೆಯಲ್ಲಿ ಸಾಂದೀಪನಿಸಾಧನಾಲಯ ಪ್ರಾರಂಭಿಸಿ ಬ್ರಹ್ಮಚಾರಿ, ಬ್ರಹ್ಮಚಾರಿಣಿಯರಿಗೆ ತರಬೇತಿ ನೀಡಿ ಕಾಲಕ್ರಮದಲ್ಲಿ ಸನ್ಯಾಸದೀಕ್ಷೆ, ಇದು ದೇಶದಾದ್ಯಂತ ನಡೆಯಲು ಪ್ರಾಂತೀಯಭಾಷೆಗಳಾದ ಹಿಂದಿ, ತೆಲುಗು, ಕನ್ನಡ, ತಮಿಳು, ಮಲಯಾಳಂ ಗಳಲ್ಲಿ ವೇದಾಂತಕಾಲೇಜುಗಳ ಸ್ಥಾಪನೆಯಾಯಿತು.

ಉದಾ :--

1. ಸಾಂದೀಪನಿ ಸಾಧನಾಲಯ --ಮುಂಬಯಿ
2. ಸಾಂದೀಪನಿ ಸಾಧನಾಲಯ ಹಿಮಾಲಯ -- ಹಿಮಾಚಲಪ್ರದೇಶ
3. ಸಾಂದೀಪನಿ -- ಅಲಹಾಬಾದ್
4. ಪರಂಧಾಮ್ -- ಅಹಮದಾಬಾದ್
5. ಚಿನ್ಮಯವನ -- ಕೊಯಮತ್ತೂರು
6. ಚಿನ್ಮಯವನ -- ಕ್ಯಾಲಿಫೋರ್ನಿಯಾ
7. ಚಿನ್ಮಯ ಸಾಂದೀಪನಿ -- ಚೊಕ್ಕಹಳ್ಳಿ, ಕೋಲಾರ.

೧೯೬೩ ರಿಂದ ೧೯೯೨ ರವರೆಗೆ ಈ ಸಾಧನಾಲಯಗಳಲ್ಲಿ ತರಬೇತಿ ಹೊಂದಿದ ಯುವಕರ ಸಂಖ್ಯೆ ಒಟ್ಟು ೩೦೦ ಕ್ಕೂ ಹೆಚ್ಚು. ಅನೇಕ ಹಿರಿಯ ಸನ್ಯಾಸಿಗಳು ದೇಶಾದಾದ್ಯಂತ ಈ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದಾರೆ. ಉದಾ :-- ಸ್ವಾಮಿ ಪುರುಷೋತ್ತಮಾನಂದ, ಸ್ವಾಮಿ ಶಾರದಾ ಪ್ರಿಯಾನಂದ, ಸ್ವಾಮಿ ಜ್ಯೋತಿರ್ಮಯಾನಂದ, ಸ್ವಾಮಿ ಬ್ರಹ್ಮಾನಂದ, ಸ್ವಾಮಿ ತೇಜೋಮಯಾನಂದ, ಸ್ವಾಮಿ ಚಿದಾನಂದ, ಸ್ವಾಮಿನಿ ಸುಪ್ರೀತಾನಂದ.

ಭಕ್ತಿಮಾರ್ಗಕ್ಕೆ ಕೊಡುಗೆ :-- 1) ಹಲವಾರು ದೇಗುಲಗಳ ನಿರ್ಮಾಣ, ಹಾಗೂ ಜೀರ್ಣೋದ್ಧಾರ ಕಾರ್ಯಗಳು--

1. ಜಗದೀಶ್ವರ ದೇಗುಲ -- ಸಾಂದೀಪನಿ-- ಮುಂಬಯಿ
2. ಶ್ರೀಕೃಷ್ಣ ದೇಗುಲಗಳು -- ಕೇರಳ
3. ದೀನಬಂಧು ದೇಗುಲ -- ಬೆಂಗಳೂರು
4. ಶ್ರೀರಾಮ ದೇವಸ್ಥಾನ -- ರೇವಾ
5. ಭುವನೇಶ್ವರಿದೇವಿ -- ತ್ರಿಚೂರ್
6. ಶ್ರೀ ಸೀತಾರಾಮ ಮಂದಿರ, ವೀರಹನುಮಾನ್, ಗಣೇಶ -- ಸಿದ್ಧಬಾರಿ
7. ಬಾಲಕೃಷ್ಣ ದೇಗುಲ -- ಕೋಲಾರ

2) ಸತ್ಸಂಗದ ಭವನಗಳು :-- ೧) ತಪೋವನ ಕುಟೀರ -- ಉತ್ತರಕಾಶಿ, ೨) ಚಿನ್ಮಯ ತಪೋವನ -- ಮಧುರೈ.

ಸಾಂಸ್ಕೃತಿಕ ಚಟುವಟಿಕೆಗಳು :-- ಭಜನ ಮೇಳಗಳು, ನೃತ್ಯ ಸಂಗೀತ -- ದೀಪ ಸಂಯೋಜನಯೊಂದಿಗೆ, ಯುವಕರಿಗೆ ಸೈಕಲ್‌ಯಾತ್ರಾಗಳು, ರಾಷ್ಟ್ರೀಯ ಯುವಮೇಳ, ಪ್ರಬಂಧ, ಗೀತಾ, ಸ್ಪರ್ಧೆಗಳು.

ಸಾಹಿತ್ಯಿಕ ಕೊಡುಗೆ:--ಆಂಗ್ಲ ಭಾಷೆಯಲ್ಲಿ ೨೫೦ ಕ್ಕೂ ಹೆಚ್ಚು ವೇದಾಂತ ಕೃತಿಗಳ ಮತ್ತು ಭಗವದ್ಗೀತಾ

ಸ್ವಾಮಿ ಚಿನ್ಮಯಾನಂದರು ಸ್ವಾತಂತ್ರ್ಯ ಭಾರತ ಕಂಡ ಮಹಾನ್ ಚೇತನಗಳಲ್ಲಿ ಒಬ್ಬರು. ಸ್ವಾತಂತ್ರ್ಯದೊಡನೆಯೇ ಭಗವಂತನ ಬಲುವಳಿ ಚಿನ್ಮಯಾನಂದರು ಎಂದರೂ ನಡೆಯುತ್ತದೆ. ಭಾರತ ಗಣತಂತ್ರವಾದ ಹಲವು ದಿನಗಳಲ್ಲೇ ಜ್ಞಾನ ಯಜ್ಞ ತಂತುವನ್ನೂ ಜನಜೀವನದಲ್ಲಿ ಹಾಸು ಹೊಕ್ಕಾಗಿಸಲು ನಿರಂತರವಾಗಿ ಪ್ರಯತ್ನಿಸಿದ ಅವರು ಇಂದು ನಮ್ಮಲ್ಲಿ ಇಲ್ಲ. ಆ ದಿವ್ಯಚೇತನದ ನೆನಪಿನಲ್ಲಿ ಈ ಲೇಖನವನ್ನು ಸಾದರಪಡಿಸಲಾಗಿದೆ--

ಸಂ||

## ಸಪ್ತಗಿರಿ

## ಬರಹಗಾರರಿಗೆ ಸೂಚನೆ :

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು**

ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ--೫೧೭ ೫೦೭

ಚಿತ್ತೂರು ಜಿಲ್ಲೆ, ಆಂ. ಪ್ರ.

ರಚನೆ. ಇವುಗಳು ಗುಜರಾತಿ, ಹಿಂದಿ, ಕನ್ನಡ, ಮಲಯಾಳಂ, ಮರಾಠಿ, ತೆಲುಗು, ತಮಿಳು, ಭಾಷೆಗಳಿಗೆ ತರ್ಜುಮೆಗೊಂಡಿವೆ. ಈ ಭಾಷೆಗಳಲ್ಲಿ ಮಾಸಪತ್ರಿಕೆಗಳು ಪ್ರಕಟವಾಗುತ್ತವೆ. ಶ್ರವಣ -- ದೃಶ್ಯ -- ಕ್ಯಾಸೆಟ್‌ಗಳ, ಧ್ವನಿಸುರುಳಿಗಳ ಪ್ರಕಟಣೆ.

ಪ್ರಕಟಣಾಕೇಂದ್ರಗಳು:-- ಮುಂಬಯಿ, ಅಹಮದಾಬಾದ್, ಕಾನ್ಪುರ, ಬೆಂಗಳೂರು, ಕೇರಳ, ಪುಣೆ, ಮದ್ರಾಸ್, ಆಂಧ್ರಪ್ರದೇಶಗಳಿಂದ ನಿಯತಕಾಲಿಕೆ, ಮಾಸಪತ್ರಿಕೆಗಳು ಪ್ರಕಟವಾಗುತ್ತಿವೆ.

ಸ್ವಾಧ್ಯಾಯ ತರಗತಿ:-- ವೇದಾಂತ ಅಧ್ಯಯನಕ್ಕಾಗಿ ವಯಸ್ಕರಿಗೆ ಸ್ವಾಧ್ಯಾಯಗೋಷ್ಠಿ, ಮಹಿಳೆಯರಿಗಾಗಿ ದೇವಿ ಗ್ರೂಪ್ಸ್, ಯುವಕರಿಗಾಗಿ ಯುವಕೇಂದ್ರ, ಮಕ್ಕಳಿಗಾಗಿ ಬಾಲವಿಹಾರ ತರಗತಿಗಳು. ವಾರದಲ್ಲಿ ಒಂದುದಿನ ನುರಿತ ಸ್ವಯಂಸೇವಕರು, ಬ್ರಹ್ಮಚಾರಿಗಳಿಂದ ತರಗತಿಗಳು ಉಚಿತವಾಗಿ ನಡೆಯುತ್ತಿವೆ.

ಸೇವಾಚಟುವಟಿಕೆಗಳು :-- ೧. ಹಿಮಾಚಲದ ಗುಡ್ಡಗಾಡು ಜನರಿಗಾಗಿ ಸಂಚಾರಿ ಆಸ್ಪತ್ರೆಗಳು, ಗ್ರಾಮೀಣ ಪ್ರಾಥಮಿಕ ಆರೋಗ್ಯ ಘಟಕ, ದಾದಿಯರ ತರಬೇತಿ ಸಂಸ್ಥೆ -- ಸಿದ್ಧಬಾರಿ, ಹಿಮಾಚಲಪ್ರದೇಶ.

೨. 100 ಕ್ಕೂ ಹೆಚ್ಚು ಹಾಸಿಗೆಗಳುಳ್ಳ ಸುಸಜ್ಜಿತ ಚಿನ್ಮಯ ಮಿಷನ್ ಆಸ್ಪತ್ರೆ ಮತ್ತು ದಾದಿಯರ ತರಬೇತಿ ಸಂಸ್ಥೆ, ಇಂದಿರಾನಗರ -- ಬೆಂಗಳೂರು.

೩. ಚಿನ್ಮಯಾರಣ್ಯಂ -- ಹೈದರಾಬಾದಿನಲ್ಲಿ ಪಿತಾಮಹ ಸದನ, ಗುರುಕಾಲ ಶಾಲೆ, ಅನಾಥಾಲಯ, ಹರಿಹರ ಶಾಲೆ,

೪ ಪಿತಾಮಹ ಸದನ -- ರೇವಾ.

೫. ಪಿತಾಮಹಸದನ, ಹರಿಹರಶಾಲೆ -- ತಾಮರೆಪಾಕ್ಕಂ -- ಮದ್ರಾಸ್,

೬. ಪಿತಾಮಹಸದನ -- ಆರೋಗ್ಯಘಟಕ -- ಕೊಯಮತ್ತೂರು.

ಶೈಕ್ಷಣಿಕ ಕ್ಷೇತ್ರಕ್ಕೆ ಕೊಡುಗೆ :-- ೧. ಭಾರತೀಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ೬೦ ಕ್ಕೂ ಹೆಚ್ಚು ಚಿನ್ಮಯ ಪ್ರೌಢಶಾಲೆ, ಪ್ರಾಥಮಿಕ ಶಾಲೆಗಳ ಸ್ಥಾಪನೆ.

೨. ಹರಿದ್ವಾರ, ಕೇರಳಗಳಲ್ಲಿ ಕಾಲೇಜು ಶಿಕ್ಷಣ.

೩. ಬಡಮಕ್ಕಳಿಗಾಗಿ ಉಚಿತ ಹರಿಹರಶಾಲೆ.

೪ ಚಿನ್ಮಯ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ (ತರಬೇತಿ ಸಂಸ್ಥೆ)

ಚಿನ್ಮಯಮಿಷನ್ ಕೇಂದ್ರಗಳು :-- ಸ್ವಾಮಿಜಿಯವರ ಸಂದೇಶದಿಂದ ಪ್ರಭಾವಿತರಾದ ನೂರಾರು ಸಾಧಕರು ಸ್ಥಾಪಿಸಿದ ಆಧ್ಯಾತ್ಮವಿಚಾರದ ಚಟುವಟಿಕೆಗಳ ಕೇಂದ್ರವೇ ಚಿನ್ಮಯಮಿಷನ್ ಇದು ೧೦೦ ಕ್ಕೂ ಹೆಚ್ಚು ಶಾಖೆಗಳನ್ನು ದೇಶದ ಪ್ರಮುಖ ನಗರ, ಜಿಲ್ಲೆಗಳಲ್ಲಿ ಹೊಂದಿದೆ.

ಮಹಾನ್ ಚೇತನಕ್ಕೆ ಸಂದ ನಮನಗಳು :

ಪೂಜ್ಯ ಸ್ವಾಮಿಜಿಯವರ ಚಿನ್ಮಯ Movement ಗಾಗಿ ದೇಶದಾದ್ಯಂತ ಅವರಿಗೆ ಸಂದಿರುವ ಸನ್ಮಾನ, ಪ್ರಶಸ್ತಿಗಳು ಅಸಂಖ್ಯ.

ಮುಖ್ಯವಾಗಿ ಹೆಸರಿಸಬೇಕಾದುದು :-- ಸ್ವಾಮಿಜಿಯವರ ಭಕ್ತಾದಿಗಳು ಸಲ್ಲಿಸಿದ ಹೃತ್ಪೂರ್ವಕ ಗೌರವವೆಂದರೆ ಬೆಂಗಳೂರಿನಲ್ಲಿ, ಮುಂಬೈನಲ್ಲಿ ನಡೆದ ರಜತ ಹಾಗೂ ಸುವರ್ಣ ತುಲಾಭಾರಗಳೇ ಸಾಕ್ಷ್ಯ. ಇವುಗಳಲ್ಲಿ ಬಂದ ಎಲ್ಲ ಕಾಣಿಕೆಯನ್ನು ಗುರುದೇವರು ಮಿಷನ್ನಿನ ಸೇವಾಚಟುವಟಿಕೆಗಳಿಗೆ ಮೀಸಲಾಗಿಟ್ಟಿದ್ದರು.

ಚಿನ್ಮಯಾನಂದರ ಕಾರ್ಯವ್ಯಾಪ್ತಿಯನ್ನು ಹಲವಾರು ಪುಟಗಳಲ್ಲಿ ಹಿಡಿದು ಪಡಿಮೂಡಿಸುವುದು ಸಾಹಸದ ಮಾತು. ಅವರು ಹೊತ್ತಿಸಿರುವ ಆಧ್ಯಾತ್ಮ ದೀಪವನ್ನು ಎಲ್ಲೆಡೆ ಬೆಳಗಿಸುವ ಕಾರ್ಯವನ್ನು ನಾವು ಮಾಡಬೇಕಾಗಿದೆ.

ಭಗವಂತನ ಅಂಶವೇ ಆಗಿ ಬಂದವರು ಪೂಜ್ಯರು, ಅವರು ತಮ್ಮ ಇಳಿ ವಯಸ್ಸಿನಲ್ಲೂ ಉತ್ಸಾಹದಿಂದ, ಪ್ರೇಮಹೃದಯದಿಂದ ಕಾರ್ಯ ನಿರ್ವಹಿಸುತ್ತಿದ್ದ ರೀತಿ ಅದ್ಭುತವಾದದ್ದು. ಕೊನೆಗಳಿಗೆಯ ವೇದಾಂತಶಿಬಿರದ ಮುಕ್ತಾಯ ಸಮಾರಂಭದಲ್ಲಿ ಪಾಲ್ಗೊಂಡಿದ್ದರು. ಅಂದೇ ರಾತ್ರಿ ತೀವ್ರ ಹೃದಯಾಘಾತವಾಗಿ ಅವರನ್ನು ಆಸ್ಪತ್ರೆಗೆ ಸೇರಿಸಲಾಗಿ ಮೂರು ಹೃದಯದ ಬೈಪಾಸ್ ಸರ್ಜರಿಯನ್ನು ನಡೆಸಲಾಯಿತು. ಆದರೆ ಭಗವಂತನ ಇಚ್ಛೆ ಬೇರೆಯಾಗಿತ್ತು. ಅಂದರೆ ೪--೮--೯೩ ರಂದು ಬೆಳಗಿನಜಾವ ಆರು ಘಂಟೆಗೆ ಪೂಜ್ಯಸ್ವಾಮಿ ಚಿನ್ಮಯಾನಂದರು ಮಹಾಸಮಾಧಿಯಾದರು. ಅಸಂಖ್ಯಾತ ಸಾಧಕರನ್ನು -- ಭಕ್ತರನ್ನು -- ಶಿಷ್ಯವೃಂದದವರನ್ನು ಅಗಲಿರುತ್ತಾರೆ.

# ದೋಷ ದರ್ಶನ

---ಸ್ವಾಮಿ ಪುರುಷೋತ್ತಮಾನಂದ.

"ಜನ್ಮಮೃತ್ಯು ಜರಾವ್ಯಾಧಿ
ದುಃಖ ದೋಷಾನುದರ್ಶನಮ್"

ಎಂದರೆ 'ಜನನ ಮರಣ ಮುಪ್ಪು ವ್ಯಾಧಿ ದುಃಖ -- ಇವುಗಳಲ್ಲಿ ದೋಷವನ್ನು ನೋಡಬೇಕು' -- ಇದು ಭಗವದ್ಗೀತೆಯ 'ಕ್ಷೇತ್ರಕ್ಷೇತ್ರಜ್ಞಯೋಗ'ದಲ್ಲಿ ಶ್ರೀಕೃಷ್ಣ ಹೇಳಿದ ಮಾತು.

ನಾವು ಪರರ ದೋಷಗಳನ್ನು ಹುಡುಕಿನೋಡಿ ದೋಷಣೆ ಮಾಡುವುದನ್ನು ಸಾಕಷ್ಟು ದಕ್ಷತೆಯಿಂದ ಅಭ್ಯಾಸಮಾಡಿದ್ದೇವೆ. 'ಇದನ್ನೇ ಮುಂದುವರಿಸಿಕೊಂಡು ಹೋಗಿ' ಎಂದು ಶ್ರೀಕೃಷ್ಣ ಸೂಚಿಸಿದ್ದಿದ್ದಲ್ಲಿ ನಮ್ಮ ಸಾಧನೆ ಸುಲಭವಾಗುತ್ತಿತ್ತು. ಆದರೆ ಅವನು ಇಲ್ಲಿ ಬೇರೆಯೇ ಒಂದು ಪಟ್ಟಿಯನ್ನು ನಮ್ಮ ಮುಂದಿಟ್ಟು ಅದರಲ್ಲಿ ದೋಷದರ್ಶನ ಮಾಡುವಂತೆ ಹೇಳುತ್ತಿದ್ದಾನೆ. ಆದರೆ ನಿಜಕ್ಕೂ ಆಧ್ಯಾತ್ಮಿಕ ಸಾಧಕರೆನ್ನಿಸಿಕೊಂಡವರಿಗೆ ಇದೊಂದು ಅಮೂಲ್ಯ ಸಲಹೆಯೇ ಸ್ರೆ.

ನಮ್ಮ ಇಡೀ ಜೀವಿತಾವಧಿಯಲ್ಲಿ ಜನನ ಮರಣ ಮುಪ್ಪು ವ್ಯಾಧಿ ದುಃಖ ಈ ಐದು ಪ್ರಮುಖ ದೋಷಗಳು ಸೇರಿಕೊಂಡಿವೆ ಎಂಬುದು ಎಷ್ಟು ಸತ್ಯ!

ಜನನ -- ಇದೊಂದು ದೋಷವಂತೆ. ಸಂಭ್ರಮದಿಂದ ವಿವಾಹವಾಗಿ ಸಕಾಲದಲ್ಲಿ ಒಂದು ಮುದ್ದು ಮಗು ಜನಿಸಿತೆಂದರೆ ಸಿಹಿ ಹಂಚಿ ಉತ್ಸವವನ್ನೇ ಆಚರಿಸುತ್ತಾರೆ ಜನ. ಅಂದಮೇಲೆ ಜನನದಲ್ಲಿ ದೋಷವೆಲ್ಲಿ ಬಂತು? ದೋಷಪೂರ್ಣವೆಂದು ಪ್ರಜನನಕಾರ್ಯವನ್ನೇ ನಿಲ್ಲಿಸಿಬಿಟ್ಟರೆ ಭಗವಂತನ ಲೀಲಾಕಾರ್ಯವಾದರೂ ಮುನ್ನಡೆಯುವ ಬಗೆ ಹೇಗೆ? ಆದರೆ ಇಲ್ಲಿ ಆಲೋಚಿಸಬೇಕಾದ ಧಾಟಿ ಹಾಗಲ್ಲ. ನಾವು ಈ ಜಗತ್ತಿನಲ್ಲಿ ಯಾವ ಯಾವ ಕಷ್ಟನಷ್ಟ ಭ್ರಷ್ಟಗಳನ್ನು ಕಾಣುತ್ತಿದ್ದೇವೋ ಅವೆಲ್ಲವುಗಳ ಉಗಮಕ್ಕೆ ಮನುಷ್ಯ ಜನಿಸಿಬಂದುದೇ ಕಾರಣವಲ್ಲವೇ? ಅಲ್ಲದೆ ವೈಯಕ್ತಿಕವಾಗಿ ನಾವು ಯಾವ ಶಾರೀರಿಕ -- ಮಾನಸಿಕ ಯಾತನೆಗಳನ್ನು ಅನುಭವಿಸುತ್ತಿದ್ದೇವೋ ಅವುಗಳಿಗೆ ನಮ್ಮ ಜನ್ಮವೇ ಕಾರಣವಲ್ಲವೆ? ಆದ್ದರಿಂದ ಈ ನಮ್ಮ ಜನ್ಮವನ್ನು ಒಂದು ಭಾಗ್ಯವೆಂದು ಭಾವಿಸುವುದಲ್ಲ, ಅದೊಂದು ದುಃಖ ಭಾಜನ ಘಟನೆಯೆಂದು ತಿಳಿಯಬೇಕೆನ್ನುತ್ತಾನೆ ಶ್ರೀಕೃಷ್ಣ.

ಹುಟ್ಟಿದ ಮನುಷ್ಯ ಮಗುವಾಗಿಯೇ ಉಳಿಯುವುದಿಲ್ಲ, ಬೆಳೆಯುತ್ತಾನೆ. ಬೆಳೆಯುವುದೇನೋ ಸಂತಸದ ಸಂಗತಿಯೇ. ಆದರೆ ಎಲ್ಲಿಯವರೆಗೆ ಬೆಳೆಯುತ್ತ ಹೋಗುತ್ತಾನೆಂದರೆ, ಬೆಳೆಯುವ ಘಟ್ಟ ನಿಂತು ಕೊಳೆಯುವ ಮಟ್ಟಕ್ಕೆ ಬರುತ್ತಾನೆ. ಇದಕ್ಕೇ ವೃದ್ಧಾಪ್ಯ ಎಂದು ಹೆಸರು. ಇದು ಸಂತಸದ ಸ್ಥಿತಿಯೇನಲ್ಲ. ಚರ್ಮವೆಲ್ಲ ಸುಕ್ಕುಗಟ್ಟಿ ಕಣ್ಣುಗಳು ಕಳೆಗುಂದಿ, ಹಲ್ಲುಗಳು ಪಲ್ಲಟವಾಗಿ, ಆಗಾಗ ಕೆಮ್ಮಿ ಕಫವನ್ನುಗುಳುತ್ತ, ಕೋಲೂರಿಕೊಂಡು ಬರುವ ಮುದುಕನನ್ನು ಎಲ್ಲರೂ ಮೆಲ್ಲಮೆಲ್ಲನೆ ದೂರವೇ ಇರಿಸಲು ಯತ್ನಿಸುತ್ತಾರೆ. ಇಂಥ ಅಸಹಾಯಕ ಸ್ಥಿತಿಯಲ್ಲಿ ಮನುಷ್ಯ ಬಾಳಿದರೆಷ್ಟು, ಬಿಟ್ಟರೆಷ್ಟು? ಆದ್ದರಿಂದ ಈ ವೃದ್ಧಾಪ್ಯ ಎನ್ನುವುದು ನಮ್ಮ ಐಹಿಕ ಜೀವನದಲ್ಲಿ ಸೇರಿಕೊಂಡಿರುವ ಒಂದು ದೋಷ ಎನ್ನುತ್ತಾನೆ ಶ್ರೀಕೃಷ್ಣ.

ವ್ಯಾಧಿ -- ಇದು ದೇಹಧಾರಿಗಳೆಲ್ಲರೂ ಒಂದಲ್ಲ ಒಂದು ಕಾಲದಲ್ಲಿ ಒಂದಲ್ಲ ಒಂದು ಬಗೆಯಿಂದ ಅನುಭವಿಸಲೇಬೇಕಾದ ಪೀಡೆ. ಒಮ್ಮೆಯೂ ವ್ಯಾಧಿಗೆ ಗುರಿಯಾಗದೆ ನಿರೋಗಿಯಾಗಿಯೇ ಬಾಳು ಮುಗಿಸಿದ ಮಹಾತ್ಮನಾರೋ ನಮಗೆ ತಿಳಿಯದು. 'ಸಾವನ್ನಾದರೂ ಅನುಭವಿಸಬಹುದು, ನೋವನ್ನನುಭವಿಸಲಾಗದು' ಎಂಬ ಮಾತಿದೆ. ವ್ಯಾಧಿಯು ಕೊಡುವ ಯಾತನೆಯಿಂದಾಗಿ ಮನಸ್ಸು ಆತ್ಮಸ್ಥವಾಗುವುದರ ಬದಲು ಶರೀರಸ್ಥವಾಗಿ ಬಿಡುತ್ತದೆ. ಇನ್ನು ಈ ವ್ಯಾಧಿ ಎಂಬುದು ಶರೀರಕ್ಕೆ ಮಾತ್ರ ಸೀಮಿತವಲ್ಲ. ಮನಸ್ಸಿಗೂ ತಗುಲಬಹುದು. ಅದಕ್ಕೆ ಮನೋವ್ಯಾಧಿ ಎಂದೇ ಹೆಸರು. ಹೀಗೆ, ನಮ್ಮ ಜೀವಿತಾವಧಿಯಲ್ಲಿ ವ್ಯಾಧಿ ಎಂಬ ವ್ಯಾಘ್ರನ ಭಯವಿದ್ದೇ ಇದೆ.

ದುಃಖವೆಂಬುದು ಮೂರುವಿಧ -- ಆಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕ. ಈ ಮೂರು ಬಗೆಯ ದುಃಖಗಳು ಒಂದಾದಮೇಲೊಂದು ಅಥವಾ ಒಟ್ಟಿಗೇ ಆಕ್ರಮಣ ಮಾಡುತ್ತಿರುತ್ತವೆ. ಈ ದುಃಖಗಳ ವಿವರಗಳನ್ನೊಮ್ಮೆ ಭಾವಿಸಿನೋಡಿದಾಗ ಎಂಥವನಿಗೂ ವೈರಾಗ್ಯ ಬಾರದಿರದು. ಆದರೆ ಪ್ರಾಪಂಚಿಕ ಮನೋವೃತ್ತಿಯ ಗಟ್ಟಿಜನ ಈ ದುಃಖಗಳನ್ನು ಬಹುಬೇಗ ಮರೆತು ಮುಂದೆ ಸುಖ ಬರಲಿದೆ ಎಂಬ ಮುಗ್ಧ ನಿರೀಕ್ಷೆಯಲ್ಲೇ ಮುಳುಗಿರುತ್ತಾರೆ. ಸೂಕ್ಷ್ಮ ಸಂವೇದನೆಯುಳ್ಳ ವಿವೇಕಿಯು ಮಾತ್ರ ಪಂಚೇಂದ್ರಿಯಗಳು ಕೊಡುವ ಸುಖದಲ್ಲೂ ದುಃಖ ತುಂಬಿರುವುದನ್ನು ಕಾಣುತ್ತಾನೆ. ಹೀಗೆ, ಈ ಲೌಕಿಕ ಜೀವನದಲ್ಲಿ ದುಃಖರಾಶಿ ಮಿಶ್ರಿತವಾಗಿರುವುದನ್ನು ಗುರುತಿಸಿಯೂ ಯಾವನು ತಾನೆ ಇದರಲ್ಲಿ ಮೋಹಗೊಂಡಾನು?

ಇನ್ನು ಮರಣ. ಇದು ಬಹಳ ಘೋರವಾದದ್ದು. ಎಂಥಾ ವೇದಾಂತಿಯೂ ಮರಣವನ್ನು



# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ಶುಲ್ಕಸಹಿತ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ. 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

ಪೇಷ್ಕಾರ್.

ಕಂಡಾಗ ಕ್ಷಣಕಾಲವಾದರೂ ಕಂಗಾಲಾಗದಿರುವುದಿಲ್ಲ. ತನಗೆ ಈಡಾದವನನ್ನೂ ದುಃಖಿಸುವಂತೆ ಮಾಡುವ, ಅವನ ಅವಸ್ಥೆಯನ್ನು ಕಂಡ ಬಂಧುಬಳಗವನ್ನೂ ಗೋಳಾಡಿಸುವ ಮೃತ್ಯುವು ಈ ಮರ್ತ್ಯಲೋಕದಲ್ಲಿ ಬಹು ವೇಗವಾಗಿ ಸಂಚರಿಸುತ್ತದೆ. ಯಾರನ್ನು ಯಾವಾಗ ಕಬಳಿಸಬೇಕೆಂಬ ನಿಯಮವೇನೂ ಅದಕ್ಕಿರುವಂತೆ ತೋರುವುದಿಲ್ಲ. 'ಮುದುಕರನ್ನು ಮಾತ್ರವೇ ಮುಗಿಸುವವನು ನಾನು, ಮುದ್ದು ಮಕ್ಕಳನ್ನು ಮುಟ್ಟುವವನಲ್ಲ' ಎಂಬ ವ್ರತವನ್ನೇನೂ ಅದು ಇಟ್ಟುಕೊಂಡಂತಿಲ್ಲ. ಅಷ್ಟೇ ಅಲ್ಲ, ಗಟ್ಟಿಮುಟ್ಟಾದ ಧಾಂಡಿಗರನ್ನೂ ಉಂಡು ತೇಗುವುದುಂಟು ಅದು.

ಹುಟ್ಟಿದವನಿಗೆ ಸಾವು ಅನಿವಾರ್ಯ ಎಂಬುದನ್ನು 'ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ' ಎಂದು ಶ್ರೀಕೃಷ್ಣ ಗೀತೆಯ ಆರಂಭದಲ್ಲೇ ಸ್ಪಷ್ಟ ಪಡಿಸಿದ್ದಾನೆ. ಪುನರಪಿ ಜನನಂ ಪುನರಪಿ ಮರಣಂ, ಪುನರಪಿ ಜನನೀ ಜಠರೇ ಶಯನಂ' ಎಂದು ಹಾಡಿ ಈ ಲೌಕಿಕ ಜೀವನವೆಲ್ಲ ಇಷ್ಟೇ ಎಂದು ತೋರಿಸಿದ್ದಾರೆ ಶ್ರೀ ಶಂಕರಾಚಾರ್ಯರು. 'ಆಗಾಗ ಮರಣದ ಕುರಿತು ನೆನೆಪು ಮಾಡಿಕೊಳ್ಳುವುದು ಒಳ್ಳೆಯದು' ಎಂದಿದ್ದಾರೆ ಶ್ರೀರಾಮಕೃಷ್ಣರು.

ನಮ್ಮ ಮಾನವ ಜನಾಂಗ ಇಂದು -- ನಿನ್ನೆಯದಲ್ಲ. ಅಷ್ಟು ಸುದೀರ್ಘ ಕಾಲದಿಂದ ಹರಿದು ಬಂದ ಮಾನವ ಪರಂಪರೆಯಲ್ಲಿ ಆ ಹಿಂದಿನವರೆಲ್ಲ ಎಲ್ಲಿ ಹೋಗಿರಬಹುದು? ಎಲ್ಲೋ ಅಲ್ಲಲ್ಲಿ ಕೆಲವರ ಹೆಸರನ್ನು ಬಿಟ್ಟರೆ ಮಿಕ್ಕ ಅಸಂಖ್ಯಾತ ಮಾನವ ಬಂಧುಗಳ ಸಮಾಚಾರವೇ ಇಲ್ಲವಲ್ಲ! ಅಷ್ಟೊಂದು ಜನ ಈ ಭುವಿಯಲ್ಲಿ ಬದುಕಿ ಬಾಳಿದ್ದರೆಂದು ಊಹಿಸುವುದಕ್ಕಾದರೂ ಸಾಧ್ಯವೆ? ಹೀಗೆ, ಹಿಂದಿನವರನ್ನು ಇಂದಿನವರನ್ನು ಮುಂದಿನವರನ್ನು ಯಾವ ಪಕ್ಷಪಾತವೂ ಇಲ್ಲದೆ ನುಂಗಿ ನೊಣೆಯುವ ಈ ಮೃತ್ಯು ನಮ್ಮ ನಡುವೆಯೇ ಓಡಾಡಿಕೊಂಡಿದೆ! ಈ ಕಟು ಸತ್ಯವನ್ನು ಸದಾ ನೆನಪಿಟ್ಟಿರಲು ಎದೆಯುಂಟೆ ನಮಗೆ? ಆದರೆ ಯೋಗಿಯಾಗಬಯಸುವವನು, ಜ್ಞಾನಿಯಾಗಬಯಸುವವನು ಇದನ್ನು ಅನವರತ ಸ್ಮರಣೆಯಲ್ಲಿಟ್ಟಿರಲೇಬೇಕು ಎನ್ನುತ್ತಾನೆ ಶ್ರೀಕೃಷ್ಣ.

ಹೀಗೆ ಈ ದೇಹ, ದೇಹದಿಂದೊಡಗೂಡಿದ ನಮ್ಮ ಐಹಿಕ ಜೀವನ ಎಷ್ಟೊಂದು ದೋಷಗಳಿಂದ ಕೂಡಿದೆ ಎಂಬ ಅರಿವು ಮೂಡಿದಾಗ ಮನಸ್ಸು ಅತ್ಯಂತ ಸಹಜವಾಗಿ ದೇಹದ ಮೇಲಣ ಮಮತೆಯಿಂದ ಬಿಡಿಸಿಕೊಂಡು ಆತ್ಮದೆಡೆಗೆ, ಸರ್ವದೋಷವಿಮುಕ್ತವಾದ ಆತ್ಮದೆಡೆಗೆ, ದುಃಖಲೇಪವೂ ಇಲ್ಲದ ಆನಂದಮಯ ಆತ್ಮದೆಡೆಗೆ ಧಾವಿಸಲು ಅಣಿಯಾಗುತ್ತದೆ. ಈ ರೀತಿ ದೋಷದರ್ಶ ನವೂ ಒಂದು ವಿಶಿಷ್ಟ ಸಾಧನೆಯಾಗಿ ಪರಿಣಮಿಸು ತ್ತದೆ. •

# ಕಲ್ಲ ಹಳ್ಳಿ ಶ್ರೀನಿವಾಸ

---ಜಿ. ಎಸ್. ಗುಂಡಪ್ಪ.

ಕಲ್ಲಹಳ್ಳಿಯು ಬೆಂಗಳೂರಿಗೆ ಸುಮಾರು ೩೪ ಮೈಲಿ ದೂರದಲ್ಲಿ, ಕನಕಪುರದ ಬಳಿಯ ಅರ್ಕಾವತಿ ನದಿಗೆ ಸಮೀಪದಲ್ಲಿದೆ. ಈ ಕ್ಷೇತ್ರದ ಸುತ್ತಮುತ್ತಲಿನ ಬೆಟ್ಟ, ಗುಡ್ಡ, ವನ, ತೋಟ, ಗದ್ದೆಗಳ ಹಚ್ಚ ಹಸಿರು, ಕ್ಷೇತ್ರಕ್ಕೆ ಬರುವ ಭಕ್ತಾದಿಗಳ ಕಣ್ಮನಗಳಿಗೆ ಅಪಾರ ಆನಂದವನ್ನೂ, ಅಲ್ಲಲ್ಲಿ ಬೆಳೆದಿರುವ ತುಳಸಿ ಗಿಡಗಳು ನಾಸಿಕಗಳಿಗೆ ಸುವಾಸನೆಯನ್ನೂ ಕೊಟ್ಟರೆ ಈ ಕ್ಷೇತ್ರದ ಅಧಿನಾಯಕ ಶ್ರೀ ಶ್ರೀನಿವಾಸನು ತನ್ನ ಮುದ್ದಾದ, ಅನಿರ್ವಚನೀಯ ಆಕರ್ಷಣೆಯಿಂದ ಭಕ್ತರ ಹೃದಯವನ್ನೇ ಅಪಹರಿಸುತ್ತಾನೆ.

## ವಸಿಷ್ಠಪೂಜಿತ ಮೂರ್ತಿ :

ನೂರಾರು ವರ್ಷಗಳ ಹಿಂದೆ ಆಗಿನ ಕಾನಕಾನಹಳ್ಳಿ ( ಈಗಿನ ಕನಕಪುರ) ಚನ್ನಪಟ್ಟಣ ಪ್ರಾಂತಗಳ ಪಾಳೆಗಾರ ನೊಬ್ಬನಿಗೆ ತನ್ನ ಕುಲದೇವರಾದ ಶ್ರೀ ವೆಂಕಟೇಶನು ಕನಸಿನಲ್ಲಿ ಕಾಣಿಸಿಕೊಂಡು, "ವಸಿಷ್ಠರಿಂದ ಪೂಜಿಸಲ್ಪಡುತ್ತಿದ್ದ ನಾನು 'ಬನ್ನಿ ಮುಕ್ಕೊಡಲು' ಗ್ರಾಮದ ಬಳಿ ಜಲಾಧಿವಾಸದಲ್ಲಿದ್ದೇನೆ. ನೀನು ನನ್ನನ್ನು ಎತ್ತಿನಗಾಡಿಯಲ್ಲಿ ಕೂರಿಸಿಕೊಂಡು ಅಲ್ಲಿಂದ ಮುಂದೆ ರಸ್ತೆಯಲ್ಲಿ ಹೋಗುತ್ತಿರುವಾಗ ಗಾಡಿಯ ಚಕ್ರದ ಅಚ್ಚು ಯಾವಸ್ಥಳದಲ್ಲಿ ಮುರಿಯುವುದೋ ಅಲ್ಲಿ ನನ್ನನ್ನು ಪ್ರತಿಷ್ಠಾಪಿಸು ಎಂದನಂತೆ. ಅದರಂತೆ ಆ ಪಾಳೆಗಾರನು ಆ ವಿಗ್ರಹವನ್ನು ಎತ್ತಿನಗಾಡಿಯಲ್ಲಿ ಕೊಂಡೊಯ್ಯುತ್ತಿದ್ದಾಗ, ಗಾಡಿಯ ಚಕ್ರದ ಅಚ್ಚು ಈಗಿನ ಕಲ್ಲಹಳ್ಳಿಯ ಬಳಿ ಮುರಿದಿದ್ದುದರಿಂದ ಅಲ್ಲಿಯೇ ವಿಗ್ರಹವನ್ನು ಪ್ರತಿಷ್ಠಾಪಿಸಿದನು. ಮುಂದೆ ಆ ಪಾಳೆಗಾರನ ವಂಶಸ್ಥರಿಂದಲೂ, ಕಲ್ಲಹಳ್ಳಿ, ಕನಕಪುರ ಮತ್ತು ನೆರೆಹೊರೆಯ ಗ್ರಾಮಗಳ ಭಕ್ತಾದಿಗಳಿಂದಲೂ ಭವ್ಯ ದೇಗುಲದ ನಿರ್ಮಾಣವಾಯಿತು. ಮೇಲುಕೋಟೆಯ ಭಟ್ಟಾಚಾರ್ಯ ಎಂಬುವರನ್ನು ಅರ್ಚಕರನ್ನಾಗಿ ನೇಮಿಸಲಾಯಿತು.

## ಅಪೂರ್ವ ಆಕರ್ಷಣೆ :

ತಿರುಪತಿಯ ಶ್ರೀನಿವಾಸನು ಕಟಿಹಸ್ತದಾರಿಯಾದರೆ ಕಲ್ಲಹಳ್ಳಿಯ ಶ್ರೀನಿವಾಸನು ಗದಾಹಸ್ತಧಾರಿ. ಅನುಗ್ರಹ ಭಾವದ, ಭಕ್ತರನ್ನು ಆಕರ್ಷಿಸುವ ಮುಗುಳ್ನಗೆಯ ಹಾಗೂ ಮುದ್ದಾದ ಮುಖಭಂಗಿ ಅನಿರ್ವಚನೀಯ ತೇಜಸ್ಸಿನಿಂದ ಕೂಡಿದೆ. ಒಮ್ಮೆ ನೋಡಬಂದವರನ್ನು ಮತ್ತೆ ಮತ್ತೆ ಬರುವಂತೆ ಆಕರ್ಷಿಸುತ್ತದೆ. ಈ ಲೇಖನದ ಆದಿಯಲ್ಲಿ ತಿಳಿಸಿರುವಂತೆ ಕಲ್ಲಹಳ್ಳಿ ಶ್ರೀನಿವಾಸನ ವಿಗ್ರಹವನ್ನು ನೋಡುತ್ತಿದ್ದಂತೆ ಭಕ್ತರ ಹೃದಯದಲ್ಲಿ ಭಕ್ತಿರಸ ಉಕ್ಕಿ ಶರಣಾಗುತ್ತಾರೆ. ಮನದಲ್ಲಿ ಅನಿರ್ವಚನೀಯ ಶಾಂತಿ ನೆಮ್ಮದಿಗಳನ್ನು ಪಡೆದು ಹಿಂತಿರುಗುತ್ತಾರೆ.

## ತಿರುಪತಿಯಿಂದ ಬರುವ ಚೋರ :

ಪ್ರತಿವರ್ಷವೂ ಮಾಘಶುದ್ಧ ಹುಣ್ಣಿಮೆದಿನ ಕಲ್ಲಹಳ್ಳಿಯ ಶ್ರೀ ಶ್ರೀನಿವಾಸನಿಗೆ ಬ್ರಹ್ಮರಥೋತ್ಸವ ನಡೆಯುತ್ತದೆ. ತೇರಿನ ಮೇಲಿನ ಉತ್ಸವ ಮೂರ್ತಿಗೆ ಅಂದರೆ ಶ್ರೀ ಶ್ರೀನಿವಾಸನಿಗೆ ಮಹಾ ಮಂಗಳಾರತಿ ನಡೆಯುವ ವೇಳೆಯಲ್ಲಿ ಜನಸ್ತೋಮದ ಭಕ್ತಿಯ ಆವೇಶದ "ಗೋವಿಂದಾ ಗೋವಿಂದಾ" ಎಂಬ ಗಗನ ಮುಟ್ಟುವ ಕೂಗಿಗೆ ತಿರುಪತಿಯ ತಿಮ್ಮಪ್ಪನು ಒಲಿದು ತಿರುಪತಿಯನ್ನೇ ತೊರೆದು ಕಲ್ಲಹಳ್ಳಿಗೆ ಚೋರನಂತೆ ಬಂದು ಸೇರುವನಂತೆ. ಈ ಕಾರಣದಿಂದ ಈ ಗ್ರಾಮಕ್ಕೆ 'ಚೋರಪುರಿ' ಎಂಬ ಹೆಸರು ಬಂದಿದೆ ಎಂದು ಹಿರಿಯರು ಹೇಳುತ್ತಾರೆ. ಈ ಕಲ್ಪನೆಯ ಸೂಕ್ತತೆ -- ಅಸೂಕ್ತತೆ ಹೇಗಾದರೂ ಇರಲಿ, ಈ ಕ್ಷೇತ್ರಕ್ಕೆ ಬರುವವರ ಕಣ್ಮನಗಳನ್ನು ಈ ಕ್ಷೇತ್ರದ ಪ್ರಕೃತಿ ಸೌಂದರ್ಯವು ಸೂರೆಗಳ್ಳುತ್ತದೆ. ಭಕ್ತರ ಹೃದಯಗಳನ್ನು ಶ್ರೀ ಶ್ರೀನಿವಾಸನು ಅಪಹರಿಸುತ್ತಾನೆ. ಈ ಕಾರಣಗಳಿಂದಲಾದರೂ ಈ ಕ್ಷೇತ್ರಕ್ಕೆ 'ಚೋರಪುರಿ' ಎಂಬ ಹೆಸರು ಸೂಕ್ತವಾಗಿದೆ ಎನ್ನಬಹುದು.

## ಕ್ಷೇತ್ರದಲ್ಲಿನ ಇತರ ದೇವತೆಗಳು :

ಗರ್ಭಗುಡಿಯ ಮುಂದಿನ ಸುಖನಾಶಿಯ ಬಲಗಡೆ ಭವ್ಯವಾದ ಆದಿಶೇಷನ ಮೂರ್ತಿ ಇದೆ. ಈ ರೀತಿ ಆದಿಶೇಷನ ಮೂರ್ತಿ ಇರುವುದು ಬಹಳ ಅಪೂರ್ವವೆಂದು ಅನೇಕರು ಹೇಳುತ್ತಾರೆ. ದೇವಾಲಯದ ಮುಂದೆ ಎಡಗಡೆಯಲ್ಲಿರುವ ಆಂಜನೇಯ ಸ್ವಾಮಿಯನ್ನು 'ಸಂಜೀವಿನಿ ಸಂಜೀವರಾಯ' ಎಂದು ಕರೆಯುತ್ತಾರೆ. ನಾನಾ ಬಗೆಯ ಖಾಯಿಲೆಗಳಿಂದ ನರಳುವವರು ಅದರಲ್ಲೂ ವಿಶೇಷವಾಗಿ ಭೂತ ಪ್ರೇತ ಸಂಬಂಧದ ವ್ಯಾಧಿಗಳಿಂದ ನರಳುವರು ಈ ಆಂಜನೇಯನಿಗೆ ಹರಕೆ ಸಲ್ಲಿಸಿ ಪೂಜೆ ಮಾಡಿಸಿ ಗುಣಹೊಂದುತ್ತಾರೆ. ಕೆಲವರು ಔಷಧಗಳನ್ನು ಈ ಆಂಜನೇಯನ ಮುಂದೆ ಇಟ್ಟು, ಆತನಿಗೆ ಪೂಜೆ ಸಲ್ಲಿಸಿ ಮಂಗಳಾರತಿ ಮಾಡಿಸಿ ಔಷಧಿ ಸೇವಿಸಿ ತಮ್ಮ ಖಾಯಿಲೆ ಕಳೆದುಕೊಳ್ಳುತ್ತಾರೆ.

ದೇವಾಲಯದ ಬಲಗಡೆ ಸಮೀಪದಲ್ಲಿಯೇ ಗ್ರಾಮದೇವತೆಯ ದೇವಾಲಯವಿದ್ದು ಗ್ರಾಮದ ಜನರನ್ನು ಸಲಹುವ 'ಮಹಾತಾಯಿ' ಎನ್ನಿಸಿಕೊಂಡು ಪೂಜಾದಿಗಳನ್ನು ಸ್ವೀಕರಿಸುತ್ತ ಗ್ರಾಮದ ಜನರನ್ನು ಸಲಹುತ್ತಿದ್ದಾಳೆ. ದೇವಾಲಯದ ಬಲಗಡೆ ಸ್ವಲ್ಪದೂರದಲ್ಲಿರುವ ಗುಡ್ಡವೊಂದರಮೇಲೆ ಆಂಜನೇಯ ಸ್ವಾಮಿಯ ದೇವಾಲಯವಿದ್ದು ಆತನನ್ನು "ಗುಡ್ಡೆಯಪ್ಪ" ಎಂದು ಕರೆಯುತ್ತಾರೆ. ಈ ಆಂಜನೇಯನು ಶ್ರೀ ಶ್ರೀನಿವಾಸಕ್ಷೇತ್ರವನ್ನು ಎಚ್ಚರಿಕೆಯಿಂದ ಕಾಯುತ್ತಿರುವನೋ ಎಂಬಂತೆ ನೆಲೆಸಿದ್ದಾನೆ. ದೇವಾಲಯದ ಗರ್ಭಗುಡಿಯ ಹಿಂದೆ ವಿಶಾಲವಾಗಿ ಬೆಳೆದಿರುವ ಪುರಾತನ ಅಶ್ವತ್ಥವೃಕ್ಷವು ಶ್ರೀ ಶ್ರೀನಿವಾಸನಿಗೂ ಇತರ ದೇವತೆಗಳಿಗೂ, ಭಕ್ತಾದಿ



ಓದಿರಿ. ಓದಿಸಿರಿ.

# ಸಪ್ತಗಿರಿ

ತಿರುಮಲೆ -- ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸಬೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ/ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ಬೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ. (ಎಂ. ಓ. ಕೂಪನ್ನಿನ ವಿಷಯ ಬರೆಯುವ ಸ್ಥಳದಲ್ಲಿ)
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ. ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :

* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾಹಣವನ್ನು ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :

*ಸಪ್ತಗಿರಿ*

ತಿ.ತಿ.ದೇ., ತಿರುಪತಿ.

ಕೊಂಡು ಓದಿರಿ. ಕೊಂಡು ಓದಿಸಿರಿ.

ಗಳಿಗೂ ತಂಪಾದ ಗಾಳಿಯನ್ನು ಬೀಸುವ ಚಾಮರದೋಪಾದಿಯಲ್ಲಿದೆ.

## ಇಂದಿನ ಬೆಳವಣಿಗೆಗಳು :

ಮೇಲುಕೋಟೆಯ ಭಟ್ಟಾಚಾರ್ಯರ ವಂಶಿಕರಾದ ನಿವೃತ್ತ ಶಿಕ್ಷಕ 'ಭಕ್ತಶಿರೋಮಣಿ' ಶ್ರೀ ಅಷ್ಟಾಕ್ಷರಂ ನಾರಾಯಣಯ್ಯಂಗಾರ್‌ರವರು ಈಗ ದೇವಾಲಯದ ಪ್ರಧಾನ ಅರ್ಚಕರಾಗಿ ಕ್ಷೇತ್ರದ ಅಭಿವೃದ್ಧಿಗೆ ಹಗಲಿರಳೂ ಶ್ರಮಿಸುತ್ತಿದ್ದಾರೆ. "ಭಗವನ್ನಾಮಸ್ಮರಣೆಯ ಚಳುವಳಿ"ಯ ನೇತಾರರಾಗಿ ಲಕ್ಷಾಂತರ ಜನರಲ್ಲಿ ಭಗವದ್ಭಕ್ತಿ ನೆಲೆಸುವಂತೆ ಶ್ರಮ ಪಟ್ಟಿದ್ದಾರೆ. ಇವರ ಚಳುವಳಿಯ ವಿಚಾರ "ವಿಶ್ವ ಸಂಸ್ಥೆ"ಗೂ ಮುಟ್ಟಿ ಅದು ಮೆಚ್ಚಿದೆ ಎಂಬುದು ಸಂತಸದ ವಿಷಯ. ಪ್ಲವಂಗನಾಮ ಸಂವತ್ಸರದ ಜ್ಯೇಷ್ಠ ಬಹುಳ ಸಪ್ತಮಿ (೨೯--೬--೧೯೬೭) ದಿನ ನಾರಾಯಣಯ್ಯಂಗಾರ್‌ರವರು ಶ್ರೀ ಮದಷ್ಟಾಕ್ಷರ ಮಹಾಯಾಗವನ್ನು ನಡೆಸಿ ಅಂದಿನಿಂದ ಪ್ರತಿವರ್ಷವೂ ಜ್ಯೇಷ್ಠ ಬಹುಳ ಸಪ್ತಮಿ ದಿನದಂದು ವಾರ್ಷಿಕೋತ್ಸವವನ್ನು ನಡೆಸುತ್ತಿದ್ದಾರೆ. ಕ್ಷೇತ್ರಕ್ಕೆ ತ್ರಿಮತ ಮಠಾಧಿಪತಿಗಳೂ ಭೇಟಿ ಇತ್ತು ಆನಂದ--ತೃಪ್ತಿಗಳನ್ನು ವ್ಯಕ್ತಪಡಿಸಿದ್ದಾರೆ. ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆಯವರು ಈ ಕ್ಷೇತ್ರವನ್ನು ಕಂಡು ಆಕರ್ಷಿತರಾಗಿ ಸುಸಜ್ಜಿತ ಕಲ್ಯಾಣಮಂಟಪವನ್ನು ಕಟ್ಟಿಸಿಕೊಟ್ಟಿದ್ದಾರೆ. ತಮ್ಮ ಪೂರ್ವಿಕರು ದಾನವಾಗಿತ್ತ ನಿವೇಶನದಲ್ಲಿ ನಾರಾಯಣ ಅಯ್ಯಂಗಾರ್ಯರು 'ಶ್ರೀ ಪಾದುಕಾನಿಲಯ ಕುಟೀರ' ಎಂಬ ನಾಮಾಂಕಿತದ ಭವನವನ್ನು ಭಕ್ತಾದಿಗಳ ನೆರವಿನಿಂದ ಕಟ್ಟಿಸಿಕೊಟ್ಟಿದ್ದಾರೆ. ಈ ಭವನವನ್ನು ಭಕ್ತಾದಿಗಳ ವಸತಿ ಸೌಕರ್ಯಕ್ಕೆ ಮತ್ತು ಅನ್ನ ಸಂತರ್ಪಣಾ ಕಾರ್ಯಕ್ಕೆ ಉಪಯೋಗಿಸಲಾಗುತ್ತಿದೆ. ಇತ್ತೀಚೆಗೆ ದೇಗುಲದ ಮುಖಮಂಟಪದ ಬಾಗಿಲ ವಾಡಕ್ಕೆ 'ದಶಾವತಾರ'ದ ಮೂರ್ತಿಗಳನ್ನು ಅಳವಡಿಸಲಾಗಿದೆ. ನಾರಾಯಣಯ್ಯಂಗಾರ್ಯರ ನೇತೃತ್ವದಲ್ಲಿ ಕ್ಷೇತ್ರವು ದಿನೇ ದಿನೇ ಅಭಿವೃದ್ಧಿಯಾಗುತ್ತಿದ್ದು 'ಮರಿತಿರುಪತಿ' ಎನ್ನಿಸಿಕೊಂಡಿದೆ. ಮುಂದೆ ಈ ಕ್ಷೇತ್ರವು ಸುಸಜ್ಜಿತ ಧಾರ್ಮಿಕ ಪ್ರವಾಸೀ ಕೇಂದ್ರವಾಗುವ ಸೂಚನೆಗಳಿವೆ.



# ರುದ್ರಾಕ್ಷದ ಹಿರಿಮೆ

---ವಿದ್ವಾನ್ 'ರಘುಸುತ'.

ಭಾರತವು ಧಾರ್ಮಿಕ ವಿಧಿ ಹಾಗೂ ಕರ್ಮಗಳಲ್ಲಿ ಉಪಯೋಗಿಸಲ್ಪಡುವ ಅನೇಕ ಸಸ್ಯಗಳ ಮೂಲ ಸ್ಥಾನವಾಗಿದೆ. ಕಳಶ ಹುಲ್ಲು, ದರ್ಭೆ, ಯೋಗೀಶ ಪದಾ, ಕೂಠ, ಚಂದನ, ಕುಶಗ್ರಂಥಿ, ಪುತ್ರಜೀವ, ರುದ್ರಾಕ್ಷ ಇತ್ಯಾದಿಯವುಗಳು ಈ ಗುಂಪಿಗೆ ಸೇರಿವೆ.

ಧಾರ್ಮಿಕ ಪ್ರಾಮುಖ್ಯತೆ ಇರುವ ಸಸ್ಯಗಳು, ಅವುಗಳನ್ನು ಉಪಯೋಗಿಸುವ ರೀತಿ ಹಾಗೂ ಸ್ಥಳಗಳ ಆಧಾರದ ಮೇಲೆ ಅನೇಕ ಭಾಗಗಳನ್ನಾಗಿ ಮಾಡಬಹುದು. ಈ ಎಲ್ಲ ಹಣ್ಣುಗಳು, ಬೀಜಗಳು, ವೈಶಿಷ್ಟ್ಯಪೂರ್ಣ ವೃಕ್ಷಗಳ ಕಾಂಡಗಳನ್ನು ಚೂರುಗಳನ್ನಾಗಿ ಕತ್ತರಿಸಿ, ಮಾಲೆಗಳನ್ನಾಗಿ ನಿರ್ಮಿಸಿ, ಉಪಯೋಗಿಸುವರು. ಮಂತ್ರೋಚ್ಚಾರಣೆಯ ಸಮಯದಲ್ಲಿ ಸಹಾಯಕವಾಗಲು, ಜಪ ಮಾಡುವ ಸಮಯದಲ್ಲಿ ಉಪಯೋಗಿಸುವುದಕ್ಕಾಗಿ ಇವುಗಳನ್ನು ಜಪಮಾಲೆಗಳನ್ನಾಗಿ ನಿರ್ಮಿಸುವರು. ಹೀಗೆ ಜಪಮಾಲೆಗಳನ್ನಾಗಿ ಉಪಯೋಗಿಸುವ ಮಣಿಗಳಲ್ಲೆಲ್ಲ ರುದ್ರಾಕ್ಷಿಯು ಮುಖ್ಯವಾದುದು. ಇದು ವಿಶೇಷ ಪ್ರಭಾವ ಉಳ್ಳದ್ದೂ, ಹೆಚ್ಚಿನ ಪ್ರಯೋಜನಕ್ಕೆ ಬರುವಂತಹುದೂ ಆಗಿದೆ. ಈ ವಿಚಾರವನ್ನು ಪರಮೇಶ್ವರನು ಸುಬ್ರಹ್ಮಣ್ಯನಿಗೆ ತಿಳಿಸುವ ವಿವರಗಳಲ್ಲಿ ತಿಳಿಯ ಹೇಳಲಾಗಿದೆ. ಪರಮೇಶ್ವರನ ಮಾತುಗಳಲ್ಲಿ ಹೇಳುವಂತೆ, 'ಪುತ್ರ ಬೀಜವು ಇಂತಹ ಪವಿತ್ರ ಕಾರ್ಯಗಳಿಗೆ ಅನುಕೂಲಕರವಾದುದು. ಆದರೆ ಇದು ರುದ್ರಾಕ್ಷದ ಹದಿನಾರನೇ ಒಂದು ಭಾಗದಷ್ಟು ಪ್ರಭಾವವನ್ನು ಬೀರುವುದಿಲ್ಲ'.

ಶಿವೋಪಾಸನೆಯಲ್ಲಿ ರುದ್ರಾಕ್ಷವು ಒಂದು ಮುಖ್ಯ ಅಂಗವಾಗಿದೆ. ಆದುದರಿಂದ ರುದ್ರಾಕ್ಷವು ವಿಶಿಷ್ಟವೂ, ಮಹತ್ವಪೂರ್ಣವಾದುದೂ ಆಗಿದೆ.

ರುದ್ರಸ್ಯ ಅಕ್ಷಿ ರುದ್ರಾಕ್ಷಃ,
ಅಕ್ಷ್ಯುಪಲಕ್ಷಿತಮ್ ಅಶ್ರು,
ತಜ್ಜನ್ಯಃ ವೃಕ್ಷಃ

ಭಗವಾನ್ ಶಂಕರನ ಅಶ್ರುಗಳಿಂದ ಉತ್ಪನ್ನವಾದ ವೃಕ್ಷವೇ 'ರುದ್ರಾಕ್ಷ ವೃಕ್ಷ' ವೆಂದು ಹೇಳಲಾಗುತ್ತದೆ. ಇದರ ಬೀಜಗಳನ್ನೇ, ಮಣಿಗಳನ್ನಾಗಿ, ಜಪಮಾಲೆಯ ನಿರ್ಮಾಣಕ್ಕೆ ಉಪಯೋಗಿಸಲಾಗುವುದು.

'ವಿನಾ ಭಸ್ಮತ್ರಿಪುಂಡ್ರೇಣ
ವಿನಾ ರುದ್ರಾಕ್ಷ ಮಾಲಯಾ
ಪೂಜಿತೋಽಪಿ ಮಹಾದೇವೊ
ನ ಸ್ಯಾತ್ತಸ್ಯ ಫಲಪ್ರದಃ'

ಭಸ್ಮ ತ್ರಿಪುಂಡ್ರಗಳಿಂದ, ರುದ್ರಾಕ್ಷ ಮಾಲೆಯನ್ನು



ಧರಿಸದೆ ಮಾಡುವ ಮಹಾದೇವನ ಪೂಜೆಯು ಫಲಪ್ರದವಾಗುವುದಿಲ್ಲ.

## ರುದ್ರಾಕ್ಷದ ಉತ್ಪತ್ತಿ :

ಶಿವನ ಮೂಲ ಹೆಸರು ಋಗ್ವೇದದಲ್ಲಿ ರುದ್ರ ಎಂಬುದು. ರುದ್ ಅಥವಾ ರೋಧನ ಎನ್ನುವ ಸಂಸ್ಕೃತ ಪದದಿಂದ ರುದ್ರ ಎನ್ನುವ ಹೆಸರು ಉಂಟಾಗಿದೆ. ಈ ಪದದ ಅರ್ಥದ ಪ್ರಕಾರ ಅಳುವವನು ಯಾವನೋ ಅವನೇ ರುದ್ರ ಎಂದು.

ದೇವೀ ಭಾಗವತದ ಏಳನೇ ಸ್ಕಂಧದ ಪ್ರಕಾರ, ಬ್ರಹ್ಮನ ಕೋಪದಿಂದ ರುದ್ರನು ಜನಿಸಿದನು. ಪ್ರಜಾಪತಿಗಳನ್ನು ಸೃಷ್ಟಿಸುವುದಕ್ಕೆ ಮುಂಚೆಯೇ ಬ್ರಹ್ಮನು ಸನಕ, ಸನಂದನ, ಸನಾತನ ಹಾಗೂ ಸನತ್ಕುಮಾರರನ್ನು ಸೃಷ್ಟಿಸಿದ. ದುರದೃಷ್ಟವಶಾತ್ ಈ ನಾಲ್ಕೂ ಮಕ್ಕಳು ಸಂತಾನೋತ್ಪತ್ತಿಯಲ್ಲಿ ಆಸಕ್ತಿ ಇಲ್ಲದವರಾದರು. ಇದು ಬ್ರಹ್ಮನಿಗೆ ತುಂಬಾ ಕೋಪವನ್ನು ತರಿಸಿತು. ಆ ಕೋಪಾಗ್ನಿಯು ಮೂರು ಲೋಕಗಳನ್ನೂ ಸುಟ್ಟು ಭಸ್ಮಮಾಡಲು ಸಿದ್ಧವಾಯಿತು. ಆ ಮೂರು ಲೋಕಗಳೂ ಬ್ರಹ್ಮನ ಕೋಪಾಗ್ನಿಯಿಂದಲೇ ಸೃಷ್ಟಿಯಾದುವು.

ಬ್ರಹ್ಮನ ಕೋಪದಿಂದ ಬಾಗಿದ, ಹೊಳೆಯುವ ಕಣ್ಣು ಹುಬ್ಬುಗಳಿಂದ, ಅಪಾರ ತೇಜಸ್ಸಿನಿಂದ ಕೂಡಿದ ಓರ್ವ ವ್ಯಕ್ತಿಯು ಕಾಣಿಸಿಕೊಂಡನು. ನೀಲ ವರ್ಣನೂ, ಮೂರು ಕಣ್ಣುಗಳನ್ನು ಉಳ್ಳವನೂ, ಸದಾ ಅಳುತ್ತಿದ್ದವನೂ ಆದ ರುದ್ರನ ಜನನವು ಈ ರೀತಿಯಲ್ಲಾಯಿತು.

ಆ ವ್ಯಕ್ತಿಯನ್ನು ಕುರಿತು ಬ್ರಹ್ಮನು ಕೇಳಿದನು,

"ಯಾಕೆ ಅಳುತ್ತಿರುವೆ ?"

ಆಗ ಹುಡುಗನು "ನನಗೆ ಹೆಸರಿಡಬೇಕು!" ಎಂದು ಉತ್ತರಿಸಿದ.

ನೀನು ಸದಾ ಅಳುವವನನಾದುದರಿಂದ ನೀನು ರುದ್ರನೆಂದು ಕರೆಯಲ್ಪಡುವೆ!" ಎಂದು ಬ್ರಹ್ಮನು ಹೇಳಿದನು.

ಅಂದಿನಿಂದ ಆತನ ಹೆಸರು ರುದ್ರನೆಂದಾಯಿತು.

ರುದ್ರನೆಂಬ ಹೆಸರಿನೊಂದಿಗೆ ಆತನಿಗೆ ಇನ್ನೂ ಏಳು ಹೆಸರುಗಳನ್ನು ನೀಡಲಾಯಿತು. ಅವು ಯಾವುವೆಂದರೆ ಭವ, ಸರ್ವ, ಈಶಾನ ಪಶುಪತಿ, ಭೀಮ, ಉಗ್ರ ಹಾಗೂ ಮಹಾದೇವ.

ಈ ರೀತಿಯಲ್ಲಿ ರುದ್ರನನ್ನು ಈ ಎಂಟು ಹೆಸರುಗಳಿಂದ ಕರೆಯುತ್ತಾರೆ.

ಇದರಿಂದ ರುದ್ರಾಕ್ಷ ಎಂದರೆ ರುದ್ರನ ಕಣ್ಣುಗಳು ಅಥವಾ ರುದ್ರನ ಕಣ್ಣುಗಳಿಂದ ಬರುವ ಕಣ್ಣೀರು ಎಂಬರ್ಥವಾಗುತ್ತದೆ.

ರುದ್ರಾಕ್ಷದ ಉತ್ಪತ್ತಿಯ ಬಗ್ಗೆ ಕೆಲವೊಂದು ಕಥೆಗಳೂ, ವಾದಗಳೂ ಇವೆ.

ಒಂದು ವಾದ ಹೀಗಿದೆ--

ಪರಮಶಿವನು ರಾಕ್ಷಸರೊಂದಿಗೆ ಯುದ್ಧಮಾಡಿ, ತ್ರಿಪುರಗಳನ್ನು ಸುಟ್ಟು ಹಾಕಿದ. ಆ ಸಮಯದಲ್ಲಿ ಬಹಳಷ್ಟು ಜೀವನಾಶವಾಯಿತು. ಇದನ್ನು ಕಂಡ ಮೃದು ಹೃದಯಿಯಾದ ಪರಮೇಶ್ವರನು ಸಂತಪ್ತನಾಗಿ ಅತ್ತು ಬಿಟ್ಟನು. ನೆಲದ ಮೇಲೆ ಬಿದ್ದ ಅವನ ಕಣ್ಣೀರ ಹನಿಗಳು ವೃಕ್ಷಗಳಾಗಿ ಬೆಳೆದು, ಅದರಲ್ಲಿ ಹಣ್ಣುಗಳು ಕಾಣಿಸಿಕೊಂಡವು. ಆ ಹಣ್ಣುಗಳಲ್ಲಿನ ವಾಟೆಗಳಿಂದ ಕಲ್ಲುಗಳ ತರಹದ ವಸ್ತುಗಳು ಹೊರಬಂದವು. ಇವೇ ರುದ್ರಾಕ್ಷಿಗಳು.

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

ಭೂಮಿಯ ಒಂದು ವಿಶಿಷ್ಟ ಗುಣ ಇಲ್ಲಿನ ಹಸಿರು. ಗಿಡವಾಗಿ, ಮರವಾಗಿ, ವನವಾಗಿ, ಕಾಡಾಗಿ ಮನುಷ್ಯನ ಜೊತೆಗೇ ಬೆಳೆದು, ಭೂಮಿಯ ಮೇಲಿನ ಮನುಷ್ಯನ ಇರವನ್ನು ಅರ್ಥಪೂರ್ಣ ಆಗಿಸಿರುವುದು ಹಸಿರು. ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಯಲ್ಲಿ ಪರಂಪರೆಯಿಂದ ನೀರುನೆರಳಿನ ತಾಣವಾಗಿ ಪ್ರಸಿದ್ಧಿ ಪಡೆದದ್ದು ಉಂಟು. ಅಂತಹ ಹಿರಿಮೆಯ ಪರಿಸರವನ್ನು ರಕ್ಷಿಸಲು 1981 ರಲ್ಲಿ 25 ಲಕ್ಷ ವೃಕ್ಷಗಳನ್ನು ಬೆಳೆಸುವ ವನಸಂರಕ್ಷಣೆಯ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಯಿತು. ಅದರ ಯಶಸ್ವಿ ಅನುಷ್ಠಾನದಿಂದ ಸ್ಫೂರ್ತವಾಗಿ ಹಲವಾರು ವನಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸರ್ವಜನಿಕರನ್ನೂ ಈ ಪರಿಸರ ಪರಿರಕ್ಷಣೆಯ ಪವಿತ್ರಕಾರ್ಯದಲ್ಲಿ ಪಾಲುಗೊಳ್ಳಲು ಯೋಜನೆಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಹಲವು ಈ ರೀತಿ ಇವೆ.

## ವೃಕ್ಷ ಸಂವರ್ಧನ ಯೋಜನೆ :

ಒಂದು ಎಕರೆ ಸ್ಥಳದಲ್ಲಿ ರೂ. 15,000 ರೂಪಾಯಿ ನೀಡಿದವರ ಹೆಸರಿನಲ್ಲಿ ಉಪವನವನ್ನು ಬೆಳೆಸಲಾಗುವುದು. ದಾನಿಗಳಿಗೆ ಹತ್ತು ವರ್ಷಗಳಕಾಲ ಪ್ರತಿವರ್ಷದಲ್ಲಿ ಎರಡು ದಿನ ತಿರುಮಲೆಯಲ್ಲಿ ಉಚಿತ ವಸತಿ ನೀಡಿ ಅವರಿಗೆ ಈ ಕಾಲದಲ್ಲಿ 5 ಮಂದಿಗೆ ಉಚಿತ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವೃಕ್ಷ ಪ್ರಸಾದ :

ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಸಸಿಗಳನ್ನು ಬೆಳೆಸುವ ಈ ಯೋಜನೆಯಲ್ಲಿ ದಾನಿಗಳ ಹೆಸರಿನಲ್ಲಿ ಪ್ರತಿವರ್ಷವೂ ನೂರು ಗಿಡಗಳನ್ನು ವಿತರಣೆ ಮಾಡಲಾಗುವುದು. ಹತ್ತು ಸಾವಿರ ರೂಪಾಯಿಗಳ ದಾನದಿಂದ ಈ ಯೋಜನೆಯಲ್ಲಿ ಪಾಲುಗೊಳ್ಳುವ ದಾನಿಗಳಿಗೆ ಪ್ರತಿವರ್ಷವೂ ಎರಡುದಿನ ತಿರುಮಲೆಯಲ್ಲಿ ಉಚಿತ ವಸತಿ 5 ಮಂದಿಗೆ ಉಚಿತ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ಸ್ಮಾರಕ ವನ :

ಒಂದೆಡೆ ಹತ್ತು ಮರಗಳನ್ನು 5 ವರ್ಷ ನೋಡಿಕೊಳ್ಳುವ ಈ ಯೋಜನೆಯಲ್ಲಿ 2000 ರೂ. ಗಳನ್ನು ನೀಡುವ ದಾನಿಗಳ ಹೆಸರನ್ನೆ ಈ ತರುಸಮೂಹಕ್ಕೆ ನೀಡಲಾಗುವುದು. ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವನಸಂರಕ್ಷಣ ಭಾಗಸ್ವಾಮ್ಯ :

ಏಳು ಬೆಟ್ಟಗಳ ವನಾಚ್ಛಾದನೆಯನ್ನು ಸಂರಕ್ಷಿಸುವ ಉದ್ದೇಶದ ಈ ಯೋಜನೆಯಲ್ಲಿ 1000 ರೂ.ಗಳ ದಾನದಿಂದ ಪಾಲುಗೊಳ್ಳಬಹುದು. ದಾನಿಗಳ ಹೆಸರನ್ನು ಮುಖ್ಯವಾಗಿ ಪ್ರದರ್ಶಿಸಲಾಗುವುದು. ಅವರ ಐದು ಮಂದಿಗೆ ಒಂದು ವರ್ಷ ವಿಶೇಷ ಪ್ರವೇಶದಲ್ಲಿ ದರ್ಶನಾವಕಾಶ ನೀಡಲಾಗುವುದು.

## ಅಧ್ಯಯನ ವನಗಳು :

ಸಸ್ಯವನದಲ್ಲಿ ಒಂದು ಬಗೆಯ ಸಸ್ಯದ ವಿಶೇಷ ಆರೈಕೆ ಮಾಡಲಾಗುವುದು. ಸಸ್ಯದ ಬಳಿ ದಾನಿಯ ಹೆಸರಿನ ಫಲಕವಿಡಲಾಗುವುದು. ಇದಕ್ಕೆ ದಾನ ನೀಡಬೇಕಾದ ಮೊತ್ತ ರೂ. 500/--

## ವೃಕ್ಷ ದತ್ತತೆ :

ತಿರುಮಲೆಯ ಹಾದಿಯಲ್ಲೂ ಬೀದಿಬದಿಗಳಲ್ಲೂ ವೃಕ್ಷಗಳನ್ನು ಬೆಳೆಸುವ ಈ ಯೋಜನೆಯಲ್ಲಿ 250 ರೂ. ನೀಡಿದವರ ಹೆಸರನ್ನು ಮರದ ಬಳಿ ಫಲಕದಲ್ಲಿ ಪ್ರದರ್ಶಿಸಲಾಗುವುದು.

ತಿರುಮಲೆಯ ಅರಣ್ಯವು ನಮ್ಮ ಪರಂಪರೆಯ ಕೊಡುಗೆಯಾಗಿದ್ದು ಅದನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ತಲುಪಿಸುವ.

ದಶಕೂಪ ಸಮೋವಾಪಿ ದಶವಾಪಿ ಸಮೋ ಹ್ರದ
ದಶ ಹ್ರದ ಸಮಃ ಪುತ್ರ ದಶಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ ಹತ್ತು ಗಂಡುಮಕ್ಕಳು ಒಂದು ತರುವಿಗೂ ಸಮ.

ದಯವಿಟ್ಟು ಈ ಉದಾತ್ತ ಯೋಜನೆಗಳಲ್ಲಿ ಭಾಗಿಗಳಾಗಬೇಕೆಂದು ಭಕ್ತ ಬಂಧುಗಳಲ್ಲಿ ವಿನಂತಿಸಲಾಗಿದೆ.

ತಮ್ಮ ದಾನಗಳನ್ನು ಕಳುಹಿಸಬೇಕಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇವಸ್ಥಾನಗಳು,

ತಿರುಪತಿ -- 517 507.

ಮತ್ತೊಂದು ವಾದದ ಪ್ರಕಾರದ ರುದ್ರಾಕ್ಷದ ಸೃಷ್ಟಿಯ ಬಗ್ಗೆ ದೇವೀ ಭಾಗವತದ, ೧೧ನೇ ಸ್ಕಂಧ ದಲ್ಲಿ ಈ ರೀತಿಯ ವಿವರಗಳಿವೆ.

ಬಹಳ ಹಿಂದೊಮ್ಮೆ 'ತ್ರಿಪುರ' ಎನ್ನುವ ಅಸುರನಿದ್ದನು. ಇವನು ಬಲಶಾಲಿಯಾಗಿದ್ದು, ಸಾಹಸಿಯಾಗಿದ್ದರೂ ಜಗತ್ಕಂಟಕನಾಗಿದ್ದನು. ಇವನು ಯುದ್ಧ ಹೂಡಿ, ದೇವತೆಗಳು ಹಾಗೂ ದೇವತಾನಾಯಕರನ್ನೆಲ್ಲ ಒಟ್ಟಿಗೆ ಜಯಿಸಿ, ಅಸುರರಿಗೇ ಚಕ್ರವರ್ತಿಯಾದನು.

ಇದರಿಂದ ದುಃಖಿತರಾದ ದೇವತೆಗಳು ಪರಮೇಶ್ವರನ ಬಳಿಗೆ ಹೋಗಿ ತಮ್ಮ ದುಃಖವನ್ನು ತೋಡಿಕೊಂಡರು. ಇದರಿಂದ ಪ್ರಭಾವಿತನಾದ ಪರಮೇಶ್ವರನು ದುಷ್ಟ ಶಿಕ್ಷಣ ಮಾಡುವುದರೊಂದಿಗೆ, ಶಿಷ್ಟ ಪರಿಪಾಲನೆಯನ್ನೂ ಮಾಡಬೇಕೆಂದು ತೀರ್ಮಾನಿಸಿದನು. ತ್ರಿಪುರಾಸುರನನ್ನು ಹೇಗೆ ಕೊಲ್ಲುವುದೆಂದು ಯೋಚಿಸಿದನು. ಯೋಗದ ಪರಿಭಾಷೆಯಿಲ್ಲದೆ ಈ ಕಾರ್ಯ ಸುಗಮವಾಗುವುದಿಲ್ಲವೆಂದು ತಿಳಿದು, ತಪಸ್ಸು ಮಾಡಲು ಪ್ರಾರಂಭಿಸಿದನು. ತೆರೆದ ಕಣ್ಣುಗಳಿಂದ ಒಂದು ಸಹಸ್ರ ದೇವ ವರ್ಷಗಳು ಅಥವಾ ೩೬ ಲಕ್ಷ ಮಾನವ ವರ್ಷಗಳವರೆಗೆ ಘೋರವಾದ ತಪಸ್ಸು ಮಾಡಿದ. ಈ ಸಮಯದಲ್ಲಿ ಆ ಭಯಾನಕ ಅಸುರನನ್ನು ಕೊಲ್ಲುವಂತಹ ಒಂದು ಮಹಾನ್, ಶಕ್ತಿಯುತ ಆಯುಧವೊಂದರ ಬಗ್ಗೆ ಚಿಂತನೆ ಗೈದ. ಅದರಿಂದ 'ಅಪ್ರತಿಭ ಶಕ್ತ್ಯಾಯುಧ'ವು ಸೃಷ್ಟಿಯಾಗಿ ತ್ರಿಪುರಾಸುರನ ಸಂಹಾರವಾಯಿತು.

ಈ ಆಯುಧದ ಸೃಷ್ಟಿಯ ಸಮಯದಲ್ಲಿ, ಪರಮೇಶ್ವರ ಕಣ್ಣರೆಪ್ಪೆಗಳು ಅಲುಗಿ, ಅವುಗಳಿಂದ ಕಣ್ಣೀರ ಹನಿಗಳು ಉದುರಿದುವು. ಮುಂದಿನ ಜೀವ ನಾಶವನ್ನು ನೆನೆದು, ಮನಕರಗಿ, ಅಲ್ಲಿಂದ ಹೊರ ಬಂದ ಕರುಣಾಬಿಂದುಗಳಾಗಿದ್ದುವು. ಈ ಹನಿಗಳಿಂದ ರುದ್ರಾಕ್ಷ ವೃಕ್ಷಗಳು ಬೆಳೆದುವು.

ಸೂರ್ಯನ ಕಣ್ಣಿನಿಂದ ೧೨ ರೀತಿಯ ರುದ್ರಾಕ್ಷಗಳೂ, ಚಂದ್ರನ ಕಣ್ಣುಗಳಿಂದ ೧೬ ರೀತಿಯವೂ, ಅಗ್ನಿಯ ಕಣ್ಣಿನ (ವಹ್ನಿನೇತ್ರ) ಕಣ್ಣೀರಿನಿಂದ ಹತ್ತು ರೀತಿಯ ರುದ್ರಾಕ್ಷ ಮರಗಳೂ ಹುಟ್ಟಿದುವು.

ತ್ರಿಪುರಸ್ಯ ವಧಾರ್ಥಾಯ
ದೇವಾನಾಂ ತಾರಣಾಯ ಚ
ಸರ್ವ ವಿಘ್ನೋಪ ಶಮನಂ--
ಅಘೋರಾಸ್ತ್ರಮ ಚಿಂತಯಮ್

ದಿವ್ಯ ವರ್ಷ ಸಹಸ್ರಂ ತು
ಚಕ್ಷುರುನ್ಮೀಲಿತಂ ಮಯಾ
ಪಶ್ಚಾನ್ಮಮಾ ಕುಲಾಕ್ಷಿಭ್ಯಃ
ಪತಿತಾ ಜಲ ಬಿಂದವಃ ೭

ತತ್ರಾಶ್ರು ಬಿಂದುತೋ ಜಾತಾ
ಮಹಾರುದ್ರಾಕ್ಷ ವೃಕ್ಷಕಾಃ
ಮಮಾ ಜ್ಞಯಾ ಮಹಾಸೇನ
ಸರ್ವೇಷಾಂ ಹಿತಕಾಮ್ಯಯಾ ೮

ಬಭೂವುಸ್ತೇ ಚ ರುದ್ರಾಕ್ಷಾ
ಅಷ್ಟಾತ್ರಿಂಶತ್ಪ ಭೇದತಃ
ಸೂರ್ಯನೇತ್ರ ಸಮುದ್ ಭೂತಾಃ
ಕಪಿಲಾ ದ್ವಾದಶ ಸ್ಮೃತಾಃ ೯

ಸೋಮ ನೇತ್ರೋ ತ್ಥಿತಾಃ
ಶ್ವೇತಾಸ್ತೆ ಷೋಡಶವಿಧಾಃ ಕ್ರಮಾತ್
ವಹ್ನಿ ನೇತ್ರೋದ್ಭವಾಃ ಕೃಷ್ಣಾ
ದಶಭೇದಾ ಭವಂತಿ ಹಿ ೧೦

(ದೇವೀಭಾಗವತ -- ೧೧ -- ೪)

## ರುದ್ರಾಕ್ಷ ವೃಕ್ಷಗಳು :

ರುದ್ರಾಕ್ಷ ವೃಕ್ಷಗಳು ಸಾಮಾನ್ಯ ಎತ್ತರದ್ದಾಗಿರುತ್ತವೆ. ಅವುಗಳ ಎಲೆಗಳ ಅಂಚುಗಳ ಗರಗಸದಂತಿರುತ್ತದೆ. ಭಾರತದ ಅನೇಕ ಭಾಗಗಳಲ್ಲಿ ಈ ಮರಗಳನ್ನು ನೆರಳಿಗಾಗಿ ಹಾಗೂ ಅಲಂಕಾರಕ್ಕಾಗಿ ಬೆಳೆಸುವರು. ಈ ವೃಕ್ಷದ ಕೆನೆ -- ಬಿಳುಪಿನ ಹೂಗಳು ಮೇ -- ಜೂನ್ ನಲ್ಲಿ ಕಾಣಿಸಿಕೊಳ್ಳುತ್ತವೆ. ನಂತರ ಹಣ್ಣುಗಳು ಬಿಡುತ್ತವೆ. ಇವು ಹಿಟ್ಟಿನ ತರಹದ ನೀಲಿಯ ಒಳ ವಾಟೆಯನ್ನು ಹೊಂದಿರುತ್ತವೆ. ಅದರಲ್ಲಿ ಕಲ್ಲಿನ ತರಹದ ಬೀಜವಿರುತ್ತದೆ. ಇದು ಕಲ್ಲಿನಷ್ಟೆ ಕಠಿಣವಾಗಿ, ಗಂಟಿನಂತೆ ಗಟ್ಟಿಯಾಗಿ ಗುಂಡಗಿರುತ್ತದೆ. ಈ ಬೀಜವು ಒಂದರಿಂದ ಎರಡು ಸೆಂ. ಮೀ. ಸುತ್ತಳತೆಯನ್ನು ಹೊಂದಿರುತ್ತದೆ.

ಈ ಬೀಜವು ಸಾಮಾನ್ಯವಾಗಿ ಐದು ಮುಖಗಳನ್ನು ಹೊಂದಿರುತ್ತದೆ. ಅಂತೆಯೇ ೧ ರಿಂದ ೧೪ ಮುಖಗಳ ರುದ್ರಾಕ್ಷಿಗಳೂ ಇವೆ. ಹೆಚ್ಚು ವದನಗಳಿರುವ ವಿಲಕ್ಷಣ ಬೀಜಗಳು ತಮ್ಮದೇ ಆದ ಉನ್ನತ ಧಾರ್ಮಿಕ ಪ್ರಾಮುಖ್ಯತೆಯನ್ನು ಹೊಂದಿದ್ದು, ಹೆಚ್ಚು ಬೆಲೆಯನ್ನು ಹೊಂದಿರುತ್ತವೆ.

ಇದರ ಹಣ್ಣುಗಳು ಮಾಗಿ ಕೆಳಗೆ ಬಿದ್ದ ಕೂಡಲೇ ಅಥವಾ ಕೆಳಗೆ ಬೀಳುತ್ತಿರುವಂತೆಯೇ ಸಂಗ್ರಹಿಸಲಾಗುವುದು. ಇವುಗಳ ಬೀಜಗಳನ್ನು ಹೊಸ ಸಸ್ಯಗಳನ್ನು ಬೆಳೆಸುವಿಕೆಗಾಗಿಯೂ ಉಪಯೋಗಿಸುತ್ತಾರೆ.

ಆಗ ತಾನೇ ಸಂಗ್ರಹಿಸಿದ ಬೀಜಗಳನ್ನು ಕೂಡಲೇ ನರ್ಸರಿಗಳಲ್ಲಿ ಬಿತ್ತಲಾಗುವುದು. ಸಸಿಗಳು ೨೦ ಸೆಂ.ಮೀ. ನಷ್ಟು ಬೆಳೆದಾಗ ೮ ಮೀ. ಅಂತರದ

**ಅತಿಸುಲಭ ಬೆಲೆಯಲ್ಲಿ**

# ಭಕ್ತಿಗೀತೆಗಳ ಕ್ಯಾಸೆಟ್‌ಗಳ ಸಮರ್ಪಣೆ

ಕನ್ನಡ ಹರಿದಾಸರ, ಅನ್ನಮಾಚಾರ್ಯರ ಅಪೂರ್ವ ಸಾಹಿತ್ಯಸೃಷ್ಟಿ
ಕಮನೀಯ ಗಾನಕಲಾಕೋವಿದರ ಸರಸ ಸಂಗೀತ ಸುಧಾವೃಷ್ಟಿ

ಕಲಿಯುಗ ಪ್ರತ್ಯಕ್ಷ ದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಕೊಂಡಾಡುತ್ತ
ಕರ್ನಾಟಕ ಹರಿದಾಸರು, ತಾಳ್ಳಪಾಕ ಅನ್ನಮಾಚಾರ್ಯರು ರಚಿಸಿದ
ಅಧ್ಯಾತ್ಮ ಸಂಕೀರ್ತನೆಗಳ ಸಂಪುಟ.

## ಕನ್ನಡ

**ತಿರುಮಲೆಯ ಚೆಲುವ**
ಗಾಯನ : ಶ್ರೀಮತಿ ವಾಣಿಜಯರಾಂ
ನಂ. 3004 ಸಿ--60

**ಮೂರು ನಾಮಗಳ ಮೂರುತಿ**
ಗಾಯನ : ಶ್ರೀಮತಿ ಸಿ. ಸರೋಜ, ಸಿ. ಲಲಿತ
ನಂ. 3005 ಸಿ--60

**ಶ್ರೀನಿವಾಸ ತತ್ತ್ವ**
ಗಾಯನ : ಬೆಳ್ಳೂರು ಸೋದರಿಯರು
ನಂ. 3006 ಸಿ--60

**ಭಳಿರೆ ತಿರುಮಲರಾಯ**
ಗಾಯನ : ಶ್ರೀ ಆರ್. ಕೆ ಶ್ರೀಕಂಠನ್
ನಂ. 3007 ಸಿ--60

**ಗೋವಿಂದ ಮಿಠಾಯಿ**
ಗಾಯನ : ಶ್ರೀಮತಿ ರತ್ನಮಾಲಾಪ್ರಕಾಶ್
ನಂ. 3008 ಸಿ--60

**ಗೋವಿಂದ ಗಾನಾಮೃತ**
ಗಾಯನ : ಸಂತ ಭದ್ರಗಿರಿ ಅಚ್ಯುತದಾಸಜೀ
ನಂ. 3009 ಸಿ--60

## ತೆಲುಗು

**ಅನ್ನಮಯ್ಯ ಸಂಕೀರ್ತನಕೌಮುದಿ**
ಗಾಯನ : ಶ್ರೀ ಡಿ. ಪಶುಪತಿ
ನಂ. 4005 ಸಿ--60

**ಅನ್ನಮಯ್ಯ ಪದಪಾರಿಜಾತಂ**
ಗಾಯನ : ಶ್ರೀ ಡಿ. ಪಶುಪತಿ
ನಂ. 4006 ಸಿ--60

**ಕ್ಯಾಸೆಟ್‌ಗಳು ಎಲ್ಲ ತಿ.ತಿ.ದೇ. ಸಮಾಚಾರ ಕೇಂದ್ರಗಳಲ್ಲೂ ದೊರೆಯುತ್ತವೆ.**

**ಕಾರ್ಯನಿರ್ವಹಣಾಧಿಕಾರಿ.**

# ತಿರುಪತಿಯಲ್ಲಿ ವಸತಿಗಾಗಿ ಸೂಚನೆ

ತಿರುಪತಿಯಲ್ಲಿ ವಸತಿಗಾಗಿ ಮುಂಗಡ ಕಾಯ್ದಿರಿಸುವಿಕೆಗಾಗಿ ಯಾತ್ರಿಕರು ಹಣವನ್ನು ಎಂ.ಓ. ಮೂಲಕ ಕಳುಹಿಸುವುದನ್ನು ಸ್ವೀಕರಿಸಲಾಗುವುದಿಲ್ಲ. ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) ತಿ.ತಿ.ದೇ. ತಿರುಪತಿ ಅಥವಾ ಎಕ್ಸಿಕ್ಯೂಟಿವ್ ಆಫೀಸರ್ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಡಿ.ಡಿ. ಯನ್ನು ಕಳುಹಿಸಬೇಕು. ಡಿ.ಡಿ. ಯ ಜೊತೆಗೆ ಬರುವ ದಿನಾಂಕ, ಬರುವವರ ಸಂಖ್ಯೆ, ತಿರುಪತಿಯಲ್ಲಿ ವಸತಿಯನ್ನು ಕಾಯ್ದಿರಿಸಬೇಕಾದ ದಿನಾಂಕಗಳನ್ನು ಬರೆದು ಕಳುಹಿಸಬೇಕು.

**ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್,**
(ರಿಸೆಪ್ಷನ್) ತಿ.ತಿ.ದೇ. ತಿರುಪತಿ.

೩೦x೩೦x೩೦ ಸೆಂ.ಮೀ. ಗುಣಿಗಳಲ್ಲಿ ಇವನ್ನು ನೆಡುವರು. ದನಗಳು ಇವುಗಳನ್ನು ತಿಂದು ಹಾಕದಂತೆ ಬೇಲಿಗಳನ್ನೂ ಕಟ್ಟುವರು. ೩ ರಿಂದ ೫ ವರ್ಷಗಳ ನಂತರ ಈ ಗಿಡಗಳು ಹೂ ಬಿಡಲು ಪ್ರಾರಂಭಿಸುತ್ತವೆ.

ಪ್ರಪಂಚಾದ್ಯಂತ ೧೨೦ ರೀತಿಯ ರುದ್ರಾಕ್ಷ ವೃಕ್ಷಗಳಿವೆ. ಇವುಗಳಲ್ಲಿ ೨೫ ರೀತಿಯವು ಭಾರತದಲ್ಲಿವೆ.

ಮೊಟ್ಟಮೊದಲು ಈ ವೃಕ್ಷಗಳು ಗೌಡ ದೇಶದಲ್ಲಿ ಹುಟ್ಟಿದುವಂತೆ. ನಂತರ ಮಥುರಾ, ಅಯೋಧ್ಯಾ, ಲಂಕಾ, ಮಲಯ, ಸಹ್ಯಾದ್ರಿ, ಕಾಶಿ ಇತ್ಯಾದಿ ದೇಶಗಳಲ್ಲಿ ಬೆಳೆಯುತೊಡಗಿದುವಂತೆ.

ರುದ್ರಾಕ್ಷ ವೃಕ್ಷಗಳ ಮೂಲವು ಭಾರತವೆಂದು ಹೆಸರು ಪಡೆದಿದ್ದರೂ, ನೇಪಾಳದ ಪರ್ವತಮಯ ಪ್ರದೇಶಗಳೇ ಹಿಂದಿನಿಂದಲೂ ಈ ವೃಕ್ಷಗಳು ಬೆಳೆಯುವ ಪ್ರದೇಶಗಳಾಗಿವೆ. ಭಾರತದಲ್ಲಿ ಉತ್ತರ ಪ್ರದೇಶ, ಮಧ್ಯ ಪ್ರದೇಶ, ಬಿಹಾರ, ಪೂರ್ವ ಬಂಗಾಳ, ಮಹಾರಾಷ್ಟ್ರ ಹಾಗೂ ಪಶ್ಚಿಮ ಘಟ್ಟ ಪ್ರದೇಶಗಳಲ್ಲಿ ಹೇರಳವಾಗಿ ಈ ವೃಕ್ಷಗಳು ಈಗಲೂ ಕಂಡುಬರುತ್ತದೆ. ಈ ವೃಕ್ಷಗಳು ಬೆಳೆಯುವ ಪ್ರಪಂಚದ ಇತರೇ ದೇಶಗಳೆಂದರೆ ಬಾಂಗ್ಲಾದೇಶ, ಬರ್ಮಾ (ಮ್ಯೆಯನ್ಮಾರ್), ಶ್ರೀಲಂಕಾ, ಮಲಯೇಷಿಯಾ, ಇಂಡೋನೇಷಿಯಾಗಳು.

## ರುದ್ರಾಕ್ಷಿ ಮಣಿಗಳ ತಯಾರಿಕೆ :

ಹಣ್ಣುಗಳಲ್ಲಿನ ವಾಟೆಗಳಿಂದ ಬೀಜಗಳನ್ನು ಬಿಡಿಸುವರು. ಹೀಗೆ ಬಿಡಿಸಿದ ಬೀಜಗಳನ್ನು ಶುಭ್ರ ಮಾಡಿ, ಅವಕ್ಕೆ ಹೊಳಪು ನೀಡಿ, ಮಣಿಗಳನ್ನಾಗಿ ಪರಿವರ್ತಿಸುವರು. ನಂತರ ಈ ಮಣಿಗಳನ್ನು ಜಪಮಾಲೆಗಳಾಗಿಯೊ ಅಥವಾ ಬಳೆಗಳಾಗಿಯೋ ತಯಾರಿಸುತ್ತಾರೆ. ಬೀಜವಾಗುವ ಸಮಯದಲ್ಲಿ ಇದರ ಮಧ್ಯದಲ್ಲಿ ರಂಧ್ರವೇರ್ಪಡುತ್ತದೆ. ಎಲ್ಲ ರೀತಿಯ ರುದ್ರಾಕ್ಷಗಳಲ್ಲೂ ಈ ರಂಧ್ರಗಳು ಇರುತ್ತವೆ. ಒಂದು ವೇಳೆ ಈ ರೀತಿಯ ರಂಧ್ರಗಳು ನಿರ್ಮಾಣವಾಗದಿದ್ದಲ್ಲಿ ಯಂತ್ರಗಳ ಮುಖಾಂತರ ಸೂಕ್ತ ರಂಧ್ರಗಳನ್ನು ಏರ್ಪಡಿಸುವರು. ಇದು ಜಪಮಾಲೆಯ ತಯಾರಿಕೆಗಾಗಿ ದಾರ ತೂರಿಸುವುದಕ್ಕೆ ಅನುಕೂಲವಾಗುತ್ತದೆ.

## ಮಣಿಗಳ ಬಣ್ಣಗಳು :

ರುದ್ರಾಕ್ಷಿಯ ಬಣ್ಣಗಳ ಆಧಾರದ ಮೇಲೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರಗಳೆಂಬ ನಾಲ್ಕು ವರ್ಣಗಳಿಗೆ ಅನುಸಾರ ಬಿಳುಪು, ಕೆಂಪು, ಮಿಶ್ರ ಹಾಗೂ ಕಪ್ಪು ಎನ್ನುವ ನಾಲ್ಕು ಬಣ್ಣಗಳ ರುದ್ರಾಕ್ಷಿಗಳಿವೆ, ಚಂದ್ರನ ಕಣ್ಣಿನಿಂದ ಬಿಳುಪು, ಸೂರ್ಯನ ಕಣ್ಣಿನಿಂದ ಕೆಂಪು ಹಾಗೂ ವಹ್ನಿನೇತ್ರದಿಂದ ಕಪ್ಪು

ಬಣ್ಣದ ರುದ್ರಾಕ್ಷಿಗಳು ದೊರಬಂದವು. ಶಾಸ್ತ್ರಾನುಸಾರ ಬ್ರಾಹ್ಮಣರು ಬಿಳುಪಿನವನ್ನೂ, ಕ್ಷತ್ರಿಯರು ಕೆಂಪು ಬಣ್ಣದ್ದನ್ನೂ, ವೈಶ್ಯರು ಮಿಶ್ರ ಬಣ್ಣ ಹಾಗೂ ಶೂದ್ರರು ಕಪ್ಪು ಬಣ್ಣದ ರುದ್ರಾಕ್ಷಿಗಳನ್ನು ಧರಿಸತಕ್ಕದ್ದು.

ಶ್ವೇತವರ್ಣಶ್ಚ ರುದ್ರಾಕ್ಷೋ
ಜಾತಿತೋ ಬ್ರಾಹ್ಮ ಉಚ್ಯತೆ
ಕ್ಷಾತ್ರೋ ರಕ್ತಸ್ತಥಾ ಮಿಶ್ರೋ
ವೈಶ್ಯಃ ಕೃಷ್ಣಸ್ತು ಶೂದ್ರಕಃ
(ದೇವೀಭಾಗವತ XI. 4. 11

ಇವುಗಳಲ್ಲಿ ಬಿಳುಪು ಹೆಚ್ಚಿನ ಧಾರ್ಮಿಕ ಪ್ರಾಮುಖ್ಯತೆಯನ್ನು ಹೊಂದಿರುತ್ತದೆ. ಅಂತೆಯೇ ಉಳಿದವುಗಳಿಗಿಂತಲೂ ಹೆಚ್ಚು ಬೆಲೆಯುಳ್ಳದ್ದಾಗಿರುತ್ತದೆ.

## ಮಣಿಗಳ ಆಕಾರ, ಹಾಗೂ ವದನಗಳು :

ರುದ್ರಾಕ್ಷಗಳಲ್ಲಿ ಆಕಾರ ಹಾಗೂ ವದನಗಳಿಗೆ ತಕ್ಕಂತೆ ಅನೇಕ ವರ್ಗಗಳಿವೆ. ಮಧ್ಯಮ ವರ್ಗದಿಂದ ಹಿಡಿದು ಸಣ್ಣ ಆಕಾರದವರೆಗೆ ಇವು ವೈವಿಧ್ಯಮಯವಾಗಿ, ವಿವಿಧ ಆಕಾರಗಳನ್ನು ಹೊಂದಿವೆ. ದೊಡ್ಡದು ದಪ್ಪ ಅವರೆಕಾಳಿಗಿಂತಲೂ ದಪ್ಪನಾಗಿರುತ್ತದೆ. ಚಿಕ್ಕದು ಮೆಣಸಿನ ಕಾಳಿನಷ್ಟಿರುತ್ತದೆ. ಇವರ ಆಕಾರ ಗುಂಡಗೆ ಇಲ್ಲವೆ ಗೋಳಾಕಾರವಾಗಿ ಇಲ್ಲವೆ ಚಪ್ಪಟಿಯಾಗಿರುತ್ತದೆ.

ಚಿಕ್ಕ ರುದ್ರಾಕ್ಷಿಗಳು ನುಣುಪಾಗಿರುತ್ತವೆ. ಇವನ್ನು ಇಂಡೋನೇಷಿಯಾ ಮತ್ತಿತರ ಆಗ್ನೇಯ ಏಷ್ಯಾದೇಶಗಳಿಂದ ರಪ್ತು ಮಾಡಿಕೊಳ್ಳಲಾಗುತ್ತಿದೆ. ಚಿಕ್ಕ ಆಕಾರದ ರುದ್ರಾಕ್ಷಿಗಳು ಕಡಿಮೆ ಶಕ್ತಿಗಳನ್ನು ಹೊಂದಿರುತ್ತವೆ -- ಎಂದು ತಂತ್ರಶಾಸ್ತ್ರವು ತಿಳಿಸುತ್ತವೆ. ಇದೇ ರೀತಿಯಲ್ಲಿ ಎರಡು ವದನಗಳಿರುವ ರುದ್ರಾಕ್ಷವು ಮುಂಡಗಿನ ದೊಡ್ಡ ರುದ್ರಾಕ್ಷಿಗಳಿಗಿಂತ ಕೆಳಮಟ್ಟದ್ದಾಗಿರುತ್ತವೆ.

ಗಂಟು ಹಾಗೂ ರುದ್ರಾಕ್ಷಿಯ ಮೇಲಿನ ಛೇದಗಳು ಒಂದರಿಂದ ಇನ್ನೊಂದಕ್ಕೆ ಭಿನ್ನವಾಗಿರುತ್ತವೆ. ನೇಪಾಳದಿಂದ ಬರುವ ರುದ್ರಾಕ್ಷಿಗಳ ಗಂಟು ಗಟ್ಟಿಯಾಗಿದ್ದು, ಆಳವಾದ ಛೇದಗಳನ್ನು ಹೊಂದಿರುತ್ತವೆ. ಇಂಡೋನೇಷಿಯಾದಿಂದ ಬರುವ ಮಣಿಗಳು ಸಾಮಾನ್ಯವಾಗಿ ಮೃದುವಾಗಿ, ನುಣುಪಾಗಿರುತ್ತವೆ. ಉದ್ದುದ್ದ (ರೇಖಾಂಶಾತ್ಮಕ)ವಾದ ಛೇದಗಳು ತೊಟ್ಟಿನಿಂದ ಪ್ರಾರಂಭವಾಗಿ, ತಳದ ಕೊನೆಯನ್ನು ಸೇರುತ್ತವೆ. ಇವು ಮಣಿಯ ಮೇಲೆ ಅನೇಕ ವದನಗಳನ್ನು ನಿರ್ಮಿಸುತ್ತವೆ. ಎಲ್ಲ ವದನಗಳೂ ಒಂದೇ ಸಮನಾಗಿರುವುದಿಲ್ಲ. ಒಂದು ಇನ್ನೊಂದರಿಂದ ಬೇರೆಯಾಗಿರುತ್ತವೆ. ಶಾಸ್ತ್ರೀಯ ರೀತ್ಯಾ ಮಣಿಗೆ ೧ ರಿಂದ ೧೪ ವದನಗಳಿರಬೇಕಾದುದು ಅಗತ್ಯ. ಇಂತಹ ಅನೇಕ ವದನಗಳಿರುವ ಮಣಿಗಳಿಂದ ಮಾಡಿದ ಜಪಮಾಲೆಗಳನ್ನು ಧರಿಸುವುದರಿಂದ ಅನೇಕ ಧಾರ್ಮಿಕ ಉಪಯೋಗಗಳು ಇವೆಯೆಂದು ದೇವೀ ಭಾಗವತವು ತಿಳಿಸುತ್ತವೆ. ಕೆಲವು ೨೧ ವದನಗಳ ಮಣಿಗಳೂ ಇವೆಯೆಂದು ಹೇಳಲಾಗುತ್ತದೆ. ಆದರೆ ಇವು ತುಂಬಾ ಅಪರೂಪ.

೫ ವದನಗಳಿರುವ ದೊಡ್ಡ ಆಕಾರದ ಮಣಿಗಳು ಸಾಮಾನ್ಯವಾಗಿ ಎಲ್ಲೆಲ್ಲೂ ಕಂಡುಬರುತ್ತವೆ. ಆದರೆ ೪ ಅಥವಾ ೬ ವದನಗಳ ಮಣಿಗಳು ಪಂಚಮುಖ ಮಣಿಗಳಷ್ಟು ಸಾಮಾನ್ಯವಾಗಿ ದೊರೆಯುವುದಿಲ್ಲ. ಏಕ ಮುಖ ಹಾಗೂ ಚತುರ್ದಶ ಮುಖಗಳ ಮಣಿಗಳು ತುಂಬಾ ಅಪರೂಪವಾಗಿ ದೊರೆಯುತ್ತವೆ.

## ರುದ್ರಾಕ್ಷದ ಉಪಯೋಗ :

ರುದ್ರಾಕ್ಷ ಮಾಲೆಯನ್ನು ಶಿರಸ್ಸಿನಲ್ಲಿ, ಮುಂಗೈ ಸುತ್ತ, ತೋಳಿನ ಸುತ್ತ, ನಡುವಿನ ಸುತ್ತ ಸುತ್ತಿಕೊಳ್ಳಬಹುದು. ಇದನ್ನು ಚಿನ್ನದೊಂದಿಗೆ ಸೇರಿಸಿ, ಆಭರಣವನ್ನಾಗಿಯೂ ನಿರ್ಮಿಸುವರು.

ರುದ್ರಾಕ್ಷಿಯೂ ಪರಿಶುದ್ಧತೆಯ ಸಂಕೇತ. ಇದು ಪವಿತ್ರ ಚಿಹ್ನೆಯ ಗುರುತು. ಅರ್ಚಕರು, ಗುರುಗಳು, ಸಾಧಕರು ತಮ್ಮ ಕತ್ತಿನ ಸುತ್ತ ಮಾಲೆಯಂತೆ, ಹಾರದಂತೆ ಧರಿಸುವರು. ಕೈನಲ್ಲಿ ಜಪಮಾಲೆಯಂತೆ ಇರಿಸಿಕೊಳ್ಳುವರು. ಸಾಧಕರು ಹಾಗೂ ತಾಂತ್ರಿಕರು ದುಷ್ಟ ಶಕ್ತಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುವುದಕ್ಕಾಗಿ, ಸಂರಕ್ಷಕ ವಸ್ತುವನ್ನಾಗಿ ಉಪಯೋಗಿಸುವರು. ಯೋಗಿಗಳು ಹಾರದಂತೆ ಕತ್ತಿನ ಸುತ್ತಲೂ ಧರಿಸುವುದಲ್ಲದೆ ತಲೆ, ಕಿವಿ, ಮುಂಗೈ, ಮಣಿಕಟ್ಟಿನ ಭಾಗಗಳಲ್ಲಿ ಅಲಂಕಾರಿಕವಾಗಿ ಧರಿಸಿಕೊಳ್ಳುವರು.

ಇವುಗಳ ಉಪಯೋಗದಲ್ಲಿ ಸಂಖ್ಯೆಯೂ ಬಹಳ ಮುಖ್ಯ. ಯಾವ ಯಾವ ದೇಹ ಭಾಗಕ್ಕೆ ಯಾವ ಯಾವ ಸಂಖ್ಯೆಯದ್ದನ್ನು ಉಪಯೋಗಿಸಬೇಕೋ ಅವನ್ನೇ ಉಪಯೋಗಿಸಬೇಕು. ಬೇರೆಯ ವುಗಳನ್ನಲ್ಲ. ೩೨ ಮಣಿಗಳ ಮಾಲೆಯನ್ನು ಕತ್ತಿಗೆ, ೪೦ ಮಣಿಗಳ ಮಾಲೆಯನ್ನು ಶಿರಸ್ಸಿಗೆ, ಆರು ಮಣಿಗಳನ್ನು ಪ್ರತಿಯೊಂದು ಕಿವಿಗೂ, ಹನ್ನೆರಡದ್ದನ್ನು ಪ್ರತಿ ತೋಳಿಗೂ, ೧೨ ದ್ದನ್ನು ಮುಂಗೈಗೂ, ಒಂದು ಮಣಿಯನ್ನು ಶಿರದ ಮೇಲೂ ಧರಿಸಬೇಕು. ೧೦೮ ಮಣಿಗಳ ಜಪಮಾಲೆಯು ಎದೆಯನ್ನು ಅಲಂಕರಿಸಿರಬೇಕು.

ರುದ್ರಾಕ್ಷಾತ್ ಕಂಠದೇಶೇ ದಶನ
ಪರಿಮಿತಾನ್ ಮಸ್ತಕೆ ವಿಂಶತಿ ದ್ವೆ
ಷಟ್ ಷಟ್ ಕರ್ಣ ಪ್ರದೇಶೇ ಕರಯುಗಲ
ಕೃತೇ ದ್ವೈಕಮೇಕಂ ಶಿಖಾಯಾಂ
ವಕ್ಷಸ್ಯಾಷ್ಟಾಧಿಕಂ ಯಃ ಕಲಯತಿ
ಶತಕಂ ಸ ಸ್ವಯಂ ನೀಲಕಂಠಃ
(ದೇವೀಭಾಗವತ XI. 3. 17)

ಅಪರೂಪ ಹಾಗೂ ವೈಶಿಷ್ಟ್ಯ ಪೂರ್ಣ ರುದ್ರಾಕ್ಷಗಳನ್ನು ಪೂಜಾಸ್ಥಳಗಳಲ್ಲಿರಿಸಿ, ದೇವರೊಂದಿಗೆ ಇವನ್ನೂ ಪೂಜಿಸುತ್ತಾರೆ. ರುದ್ರಾಕ್ಷ ಮಣಿಗಳಿಗೆ ಇರುವ ಧಾರ್ಮಿಕ ಪ್ರಾಮುಖ್ಯತೆಯು ಬೇರೆ ಯಾವ ಮಣಿಗೂ ಇಲ್ಲ, ಯಾವ ಲೋಹಕ್ಕೂ ಇಲ್ಲ. ಇವನ್ನು ವೈದ್ಯಕೀಯ ಕಾರ್ಯಗಳಲ್ಲಿಯೂ ಉಪಯೋಗಿಸುವರು.

## ಮುಕ್ತಾಯ :

ರುದ್ರಾಕ್ಷಿಯ ಮರಗಳಿಂದ ತುಂಬಿರುವ ನೇಪಾಳ ಹಾಗೂ ಹರಿದ್ವಾರಗಳಲ್ಲಿ ಹೊಸದಾಗಿ ನೆಲದ ಮೇಲೆ ಬೀಳುವ ಹಣ್ಣುಗಳ ಬೇಟೆಯಲ್ಲಿ ಅದೃಷ್ಟ ಪರೀಕ್ಷಕರು ಸುತ್ತಾಡುವುದನ್ನು ಸಾಮಾನ್ಯವಾಗಿ ನೋಡಬಹುದು. ಅಪರೂಪವೂ, ವೈವಿಧ್ಯಪೂರ್ಣವೂ ಆದ ಮಣಿಗಳೇನಾದರೂ ದೊರೆಯುವುದೇನೋ ಎಂಬುದು ಅವರ ದೂರದ ಆಸೆ.

ಭಾರತದಲ್ಲಿನ ರುದ್ರಾಕ್ಷಿಗಳ ನಿರ್ಮಾಣವು ಅದರ ಆಂತರಿಕ ಬೇಡಿಕೆಯನ್ನೂ ಕೂಡ ಪೂರೈಸಲಾರದು. ಆದುದರಿಂದಲೇ ಭಾರತ ಹಾಗೂ ಇಂಡೋನೇಷಿಯಾಗಳ ನಡುವಣ ರುದ್ರಾಕ್ಷಿಗಳ ವ್ಯಾಪಾರವು ತುಂಬಾ ಪ್ರವರ್ಧಮಾನಕ್ಕೆ ಬಂದಿದೆ. ಇದರೊಂದಿಗೆ ಕೃತಕ (ಪ್ಲಾಸ್ಟಿಕ್) ರುದ್ರಾಕ್ಷಿಗಳೂ ಕೂಡ ಮಾರುಕಟ್ಟೆಗೆ ಬಂದಿವೆ. ಇದರೊಂದಿಗೆ ಮತ್ತೂ ಒಂದು ವಿಶೇಷವಿದೆ.

ಪೂಜನೀಯ ರುದ್ರಾಕ್ಷಗಳು Elaeo carpus Sphaericus (Gaertn) K. Schum ಎನ್ನುವ ವಂಶಕ್ಕೆ ಸೇರಿದ ವೃಕ್ಷಗಳಿಂದಲೇ ದೊರೆಯುವುವು. ಇವು ನೈಜ ರುದ್ರಾಕ್ಷಿಗಳನ್ನು ನೀಡುತ್ತವೆ.

ನಕಲಿ ರುದ್ರಾಕ್ಷಗಳನ್ನು ನೀಡುವ Genera Zizyphus ಮತ್ತಿತರ ವರ್ಗಗಳ ವೃಕ್ಷಗಳೂ ಇವೆ. ಇವೂ ಕೂಡ Elaeocarpus ವಂಶಕ್ಕೆ ಸೇರಿದ ವೃಕ್ಷಗಳೇನೇ! ಆದರೆ ಮೊದಲು ತಿಳಿಸಿರುವ ವೃಕ್ಷಗಳಷ್ಟು ಶುದ್ಧರೂಪದ ಮಣಿಗಳನ್ನು ಇವು ನೀಡಲಾರವು. ಆದರೆ ಅರಿಯದ ಮುಗ್ಧ ಭಕ್ತರಿಗೆ ಈ ಮಣಿಗಳನ್ನೇ ನೈಜ, ಮೂಲ ರುದ್ರಾಕ್ಷಿ ಮಣಿಗಳೆಂದು ನಂಬಿಸಿ ಮಾರಲಾಗುತ್ತಿದೆ. ಇಂತಹ ಮೋಸಗಳಿಗೆ ಭಕ್ತರು ಬಲಿ ಬೀಳದೆ ಎಚ್ಚರಿಕೆಯಿಂದ ಇರಬೇಕಾದುದು ಅಗತ್ಯ. ಈ ನಕಲಿಯವು ಹೆಚ್ಚು ಗಟ್ಟಿಯಾಗಿರದೆ, ಶುದ್ಧರೂಪದ ಮುಖಗಳನ್ನು ಹೊಂದಿಲ್ಲದೆ, ನುಣುಪಾಗಿಲ್ಲದಿರುವುದರಿಂದ, ಸೂಕ್ಷ್ಮವಾಗಿ ಪರೀಕ್ಷಿಸಿದಲ್ಲಿ, ಅವನ್ನು ಬೇಗ ಗುರ್ತಿಸಬಹುದು.



(ಸಂಗ್ರಹ)

# ಸಂಕಷ್ಟ ಚತುರ್ಥಿ

---ಆರ್. ಜಿ. ಶ್ಯಾನಭಾಗ, ಹೊನ್ನಾವರ.

ಸಂಕಟ ಬಂದಾಗ ವೆಂಕಟರಮಣಾ ಎಂದು ಸ್ಮರಿಸುವಾಗ ದೇವನಾಮಾವಳಿಯಲ್ಲಿ ಬರುವ ವಿಘ್ನನಾಶ ಮಾಡುವ ವಿಘ್ನೇಶ್ವರ ಹೆಸರು ಪ್ರಾತಃಸ್ಮರಣೀಯವಾದುದು. ಲೌಕಿಕ ಬಾಳು ಸುಖಪ್ರದವಾಗಲೋಸುಗ ಹಾಗೂ ಪಾರಮಾರ್ಥಕ್ಕೆ ದಾರಿದೀಪ ತೋರಿಸಲೆಂದೇ ಗಣಪತಿಯ ಪೂಜಾ ಉಪಾಸನೆಗಳು ಜನಾದರಣೀಯವಾಗಿವೆ. ಧನಹೀನರು, ಚಿಂತಾಕ್ರಾಂತರು, ವಿದ್ಯಾಹೀನರು ರೋಗಪೀಡಿತರು ಹಾಗೂ ನಿಪುತ್ರಕರು ಸಂಕಲ್ಪಪೂರ್ವಕರಾಗಿ ಗಣಪತಿಯನ್ನು ಪೂಜಿಸಲು ವ್ರತನಿಷ್ಠರಾಗುತ್ತಾರೆ. ಅಂತಹ ವ್ರತಗಳಲ್ಲಿ ಶ್ರೀ ಸಂಕಷ್ಟ ಚತುರ್ಥಿ ವ್ರತವೂ ಒಂದಾಗಿದೆ.

## ವಿಘ್ನೇಶ್ವರನ ಮಹಿಮೆ

ಶ್ರೀ ಗಣೇಶನ ಕುರಿತಾಗಿರುವ ಸಂಕಷ್ಟ ಚತುರ್ಥಿ ವ್ರತದ ಕಥೆಯು ಸ್ಕಂದಪುರಾಣದಲ್ಲಿ ಬರುತ್ತದೆ. ಶೌನಕಾದಿ ಹತ್ತು ಸಹಸ್ರ ಋಷಿಗಳು ನೈಮಿಷಾರಣ್ಯದಲ್ಲಿ ಜ್ಞಾನಸತ್ರ ನಡೆಸುತ್ತಿದ್ದರು. ಆ ಸಮಯದಲ್ಲಿ ತೀರ್ಥಯಾತ್ರೆಯಲ್ಲಿರುವ ಸೂತ ಪುರಾಣಿಕನು ಅಲ್ಲಿಗೆ ಬರುತ್ತಾನೆ. ಶ್ರೀ ವೇದವ್ಯಾಸ ಮುನಿಗಳಿಂದ ಪುರಾಣ ವ್ಯಾಸಂಗ ಮಾಡಿದ ಮಹಾಜ್ಞಾನಿ ಇವನು. ಮುಂಬರುವ ಕಲಿಯುಗವು ಮಹಾ ಪಾಪದಾಯಕ ಆಗಿರುವುದರಿಂದ ಈ ತಾಪದಿಂದ ಪರಿಹಾರ ಪಡೆಯಲೋಸುಗ ಪ್ರಜಾಹಿತಾರ್ಥಕ್ಕಾಗಿ ಯಾವ ಪೂಜಾಕೈಂಕರ್ಯವನ್ನು ಕೈಕೊಳ್ಳಬೇಕೆಂದು ಅಲ್ಲಿ ನೆರೆದಿರುವ ಮುನಿವರೇಣ್ಯರು ಸೂತ ಪುರಾಣಿಕನನ್ನು ಪ್ರಶ್ನಿಸುತ್ತಾರೆ. ಉತ್ತರ ಕಲಿಯುಗದ ಜನಸಾಮಾನ್ಯರ ಉದ್ಧಾರಕ್ಕಾಗಿ ಕೇಳಿರುವ ಪ್ರಶ್ನೆಯಿಂದ ಸೂತಪುರಾಣಿಕನು ಸಂತುಷ್ಟಗೊಳ್ಳುತ್ತಾರೆ. ಇದೇ ಬಗೆಯ ಪ್ರಶ್ನೆಗಳನ್ನು ಪಾರ್ವತಿದೇವಿಯು ತನ್ನ ಪೂರ್ವಜನ್ಮದ ಪುತ್ರನಾದ ಗಣಪತಿಯಿಂದ ಕೇಳಿ ತಿಳಿದಳು. ರಾಜ್ಯಭ್ರಷ್ಟನಾಗಿ ತಿರುಗುತ್ತಿದ್ದ ಧರ್ಮರಾಜನು ಶ್ರೀಕೃಷ್ಣ ಪರಮಾತ್ಮನಿಂದ ಇದೇ ಪ್ರಶ್ನೆ ಕೇಳಿ ಪರಿಹಾರ ಪಡೆದನು. ಪಾರ್ವತಿದೇವಿ ತನ್ನ ತಪಸಿದ್ಧಿಯಾಗದಿದ್ದಾಗ ಹಾಗೂ ತನ್ನ ಮನೋಬಯಕೆ ಈಡೇರದಿದ್ದಾಗ, ನಾರದ ಮಹರ್ಷಿಗಳನ್ನು ಪ್ರಶ್ನಿಸಿ ಪರಿಹಾರವನ್ನು ಕಂಡುಕೊಳ್ಳುತ್ತಾಳೆ. ದೇವಾಧಿದೇವತೆಗಳೆಲ್ಲರೂ ಕೇಳಿರುವ ಪ್ರಶ್ನೆಗಳಿಗೆ ಶ್ರೀ ಸಂಕಷ್ಟ ಚತುರ್ಥಿ ಎನ್ನುವುದೊಂದೇ ಪರಿಹಾರೋಪಾಯವಾಗಿತ್ತೆಂದು ಸೂತ ಪುರಾಣಿಕನು ಶೌನಕಾದಿ ಹತ್ತು ಸಹಸ್ರ ಮುನಿಗಳಿಗೆ ನೆನಪಿಸಿಕೊಡುತ್ತಾನೆ. ಸಂಕಷ್ಟಹರ ವಿಘ್ನೇಶ್ವರನು ಕಲಿಯುಗದ ಆರಾಧ್ಯದೇವತೆ ಎಂದು ಅವನ ಸಂಕಷ್ಟವ್ರತದ ಮಹಿಮೆಯನ್ನು ಸೂತಪುರಾಣಿಕನು ದೇವಾಧಿದೇವತೆಗಳ ಕಥೆಗಳನ್ನು ಪೋಣಿಸಿ ಹೇಳುತ್ತಾನೆ.

## ಮಲೆಮಗಳ ಪಾಣಿಗ್ರಹಣ

ಕೃತಯುಗದಲ್ಲಿ ಜರುಗಿರುವ ಘಟನೆ ಇದಾಗಿದೆ. ದಕ್ಷನ ಯಜ್ಞಕುಂಡದಲ್ಲಿ ದೇಹಾರ್ಪಣೆ ಮಾಡಿದ ಅವನ ಪುತ್ರಿ ಸತೀದೇವಿಯು ಮುಂದೆ ಪರ್ವತರಾಜನ ಮಗಳಾಗಿ ಜನ್ಮಿಸುತ್ತಾಳೆ. ಪ್ರಬುದ್ಧಳಾದ ನಂತರ ಈ ಮಲೆಮಗಳು ಮಹಾದೇವನು ತನ್ನೀ ಜನ್ಮದಲ್ಲಿ ಬಾಳಸಂಗಾತಿಯಾಗಬೇಕೆಂದು ಬಯಸುತ್ತಿದ್ದಳು. ಪರಮ ವೈರಾಗ್ಯಶಾಲಿಯಾಗಿರುವ ಶಿವನ ಮನವೊಲಿಸಲು ಘನಘೋರ ತಪಸ್ಸನ್ನಾಚರಿಸಲಾರಂಭಿಸಿದಳು. ಅವಳ ತಪಸ್ಸು ಸಿದ್ಧಿಸಲಿಲ್ಲ. ಕನಿಕರಗೊಂಡ ನಾರದ ಮುನಿಗಳು ಅವಳ ಮನೋಬಯಕೆಯ ಈಡೇರಿಕೆಗಾಗಿ ಹಿಂದಿನ ಕಲ್ಪಿತ ಕುಮಾರನನ್ನು ಸ್ಮರಿಸಲು ಉಪಾಯ ಸೂಚಿಸುತ್ತಾನೆ. ಪಾರ್ವತಿಯು ತನ್ನ ಹಿಂದಿನ ಕಲ್ಪಿತ ಪುತ್ರನನ್ನು ಸ್ಮರಿಸಿದಾಕ್ಷಣ ಗಣಪತಿಯು ಅಲ್ಲಿ ಪ್ರತ್ಯಕ್ಷಗೊಳ್ಳುತ್ತಾನೆ. ತನಗೆ ಕರೆದ ಕಾರಣವನ್ನು ತಾಯಿಗೆ ಕೇಳುತ್ತಾನೆ. ಚಿಂತಾಕ್ರಾಂತಳಾದ ಸತೀದೇವಿ ತಪಸ್ಸು ವೈಫಲ್ಯವಾಗಿರುವುದರ ಕುರಿತಾಗಿ ಹೇಳುತ್ತಾ ದುಃಖಿಸುತ್ತಾಳೆ. ಜಗದೊಡೆಯನಾದ ಶಂಕರನು ತನ್ನ ಪತಿಯಾಗಬೇಕೆಂಬ ಮನದ ಇಂಗಿತವನ್ನು ಗಣಪತಿಯ ಎದುರು ತೋಡಿಕೊಳ್ಳುತ್ತಾಳೆ. ಸಂಕಷ್ಟಹರಣಕ್ಕಾಗಿ ನನ್ನನ್ನು ಪೂಜಿಸುವ ಸಂಕಷ್ಟ ಚತುರ್ಥಿ ವ್ರತವನ್ನು ಆಚರಿಸಬೇಕೆಂದು ತಾಯಿಗೆ ಹೇಳುತ್ತಾನೆ.

ಕುಮಾರನು ಹೇಳಿದ ಪ್ರಕಾರವೇ ಶ್ರಾವಣ ಮಾಸ ಕೃಷ್ಣಪಕ್ಷ ಚತುರ್ಥಿಯ ದಿನ ಚಂದ್ರೋದಯ ಕಾಲಕ್ಕೆದ್ದು, ಸತೀದೇವಿಯು ಗಣಪತಿಯನ್ನು ಪೂಜಿಸಿ ಅರ್ಘ್ಯ ಕೊಟ್ಟಳು. ಹಾಗೂ ವ್ರತಾಚರಣೆಯನ್ನು ಕೈಕೊಂಡಳು. ಶಿವನನ್ನು ಬಾಳಸಂಗಾತಿಯನ್ನಾಗಿ ಮಾಡಿಕೊಳ್ಳುವ ಅವಳ ಕನಸು ನನಸಾಯಿತು.

ರಾಜ್ಯಭ್ರಷ್ಟನಾಗಿರುವ ಧರ್ಮರಾಜನನ್ನು ಸಂಕಷ್ಟ ಚತುರ್ಥಿ ವ್ರತವನ್ನಾಚರಿಸಲು ಶ್ರೀಕೃಷ್ಣ ಪರಮಾತ್ಮ ಅಣಿಗೊಳಿಸುತ್ತಾನೆ. ಕಳೆದು ಹೋದ ಸಾಮ್ರಾಜ್ಯವನ್ನು ತಿರುಗಿ ಪಡೆಯುತ್ತಾನೆ. ಶತ್ರುಗಳನ್ನು ಸಂಪೂರ್ಣವಾಗಿ ಸಂಹರಿಸುತ್ತಾನೆ. ಪುನಃ ಭರತಖಂಡದ ಚಕ್ರವರ್ತಿಯಾಗಿ ಧರ್ಮರಾಜನು ಮೆರೆಯುತ್ತಾನೆ.

## ತ್ರಿಪುರಾಸುರರ ಸಂಹಾರ

ಮೂವರು ಮಹಾದೈತ್ಯರು ಬ್ರಹ್ಮದೇವರನ್ನು ಕುರಿತಾಗಿ ತಪಸ್ಸನ್ನಾಚರಿಸಿದರು. ಬ್ರಹ್ಮದೇವರನ್ನು ಒಲಿಸಿ ತಾವು ಮೂವರು ಒಂದೇ ಬಾಣನಾಟಿದಾಗಲೇ ಮರಣ ಹೊಂದಬೇಕೆಂಬ ವರವನ್ನು ಬೇಡುತ್ತಾರೆ. ಬ್ರಹ್ಮದೇವರು ಅವರ ಬೇಡಿಕೆಯ ಸಾಧಕ ಬಾಧಕಗಳನ್ನು ಯೋಚಿಸದೆ ವರವನ್ನು ನೀಡಿ ಅದೃಶ್ಯನಾಗುತ್ತಾನೆ. ಮೂವರು ದೈತ್ಯರು ಮಹಿಷಾಸುರನನ್ನು ಕರೆಯಿಸಿ ಮೂರ ಅಭೇದ್ಯ ವಿಮಾನವನ್ನು ನಿರ್ಮಿಸಿಕೊಂಡರು. ಒಂದು ಬಂಗಾರದ್ದು ಇನ್ನೊಂದು ಬೆಳ್ಳಿಯದು, ಮೂರನೆಯದು ಉಕ್ಕಿನದ್ದಾಗಿರುವ ವಿಮಾನಗಳು ನಿರ್ಮಾಣಗೊಳ್ಳುತ್ತವೆ. ಒಬ್ಬೊಬ್ಬರು ಒಂದೊಂದರಲ್ಲಿ ಕುಳಿತುಕೊಂಡು ದಿಗ್ವಿಜಯಕ್ಕಾಗಿ ವಿಶ್ವಪರ್ಯಟನವನ್ನಾರಂಭಿಸುತ್ತಾರೆ. ಈ ವರದಿಂದ ವಿಶ್ವವ್ಯಾದ್ಯಂತ ರಕ್ತಬೀಜಾಸುರನ ಶನಿಸಂತಾನ ಬೆಳೆದಂತಾಗುತ್ತದೆ. ಮೂವರು ಅಪಾರ ತೋಳ್ಬಲವನ್ನು ಹೊಂದಿ ತ್ರಿಲೋಕಗಳನ್ನು ತಮ್ಮ ಕಪಿಮುಷ್ಟಿಯಲ್ಲಿ ಇರಿಸಿಕೊಂಡರು. ಲೋಕಕ್ಕೆ ಮಾರಕವಾಗಿದ್ದ ಈ ಮೂವರು ಅಸುರರ ಕುರಿತು ಮಾತಾಡಲು ಜನರು ಹಿಂಜರಿಯುತ್ತಿದ್ದರು. ದಿಕ್ಕುಗಾಣದೆ ದೇವಾಧಿದೇವೆಗಳೆಲ್ಲರೂ ಕೈಕಟ್ಟಿ ಕುಳಿತುಕೊಂಡರು. ರಕ್ಕಸರ ವರ್ತನೆಗಳು ಮಿತಿಮೀರಿ ನಡೆದವು. ಗೋಬ್ರಾಹ್ಮಣ ಋಷಿವರೇಣ್ಯರು ಇವರಿಂದ ಸಂಪರಿಸಲ್ಪಟ್ಟರು.

ಲೋಕ ರಕ್ಷಣೆಗಾಗಿ ಉಳಿದೆಲ್ಲ ದೇವತೆಗಳು ಬ್ರಹ್ಮದೇವರಿಗೆ ಶರಣು ಬಂದರು. ಯಾವ ಉಪಾಯ ತೋಚಲಾಗದ ಬ್ರಹ್ಮನು ಅವರೆಲ್ಲರನ್ನು ವಿಷ್ಣುವಿನೆಡೆಗೆ ಕರೆದೊಯ್ದರು. ಈ ತ್ರಿಪುರಾಸುರರನ್ನು ಸಂಹರಿಸಲು ತನ್ನೋರ್ವನಿಂದ ಮಾತ್ರ ಸಾಧ್ಯವಿಲ್ಲವೆಂದು ತ್ರಿಶೂಲಪಾಣಿಯ ಸಹಾಯ ಯಾಚಿಸಬೇಕೆಂದು ಹೇಳಿದನು. ಬ್ರಹ್ಮ ವಿಷ್ಣು ಮತ್ತು ಸಕಲ ದೇವತೆಗಳೆಲ್ಲರೂ ಶಿವನಿಗೆ ಶರಣು ಬಂದರು. ಆಗ ನೀಲಕಂಠನು ಏಕಾಂತ ಸ್ಥಳದೆಡೆಗೆ ಹೋಗಿ ಗಣೇಶನನ್ನುದ್ದೇಶಿಸಿ ಸಂಕಷ್ಟ ಚತುರ್ಥಿ ವ್ರತವನ್ನಾಚರಿಸಿ ವಿಘ್ನನಾಶಕ ವಿಘ್ನೇಶ್ವರನ ಅನುಗ್ರಹ ಸಂಪಾದಿಸಿಕೊಂಡು ಬಂದ. ಭೂದೇವಿಯು ರಥವಾದಳು. ಬ್ರಹ್ಮದೇವರು ರಥಸಾರಥಿಯಾದರು. ವಿಷ್ಣು ಬಾಣ

ವಾದನು. ಶಂಕರನು ರಥವನ್ನೇರಿ ಒಂದೇ ಬಾಣದ ಹೊಡೆತಕ್ಕೆ ತ್ರಿಪುರಾಸುರನನ್ನು ಸಂಹರಿಸಿದನು. ತಲ್ಲಣಗೊಂಡಿರುವ ಜಗ ಶಾಂತಗೊಂಡಿತು, ಗಗನದಿಂದ ಶಂಕರನ ಮೇಲೆ ಪುಷ್ಪವೃಷ್ಟಿಯಾಯಿತು.

ಒಮ್ಮೆ ದೇವೇಂದ್ರನು ಐಶ್ವರ್ಯ ಹಾಗೂ ಅಧಿಕಾರ ಮದದಿಂದ ಉಬ್ಬಿ ಮೈಮರೆತಿದ್ದನು. ಐರಾವತರೂಢರಾಗಿ ಅದ್ದೂರಿಯ ಮೆರವಣಿಗೆಯಲ್ಲಿ ಹೋಗುವಾಗ ಎದುರಿಗೆ ದೂರ್ವಾಸರು ಬಂದರು. ಇಂದ್ರ ಮುನಿಗೆ ಅಸಡ್ಡೆಯನ್ನು ತೋರಿಸಿದರು. ಅವರಿಂದ ಶಾಪಗ್ರಸ್ತನಾದ ಇಂದ್ರ ರಾಜ್ಯಭ್ರಷ್ಟನಾದನು, ಶಚೀದೇವಿಯಿಂದ ಅಗಲಿದನು. ಬ್ರಹ್ಮಹತ್ಯಾದೋಷಕ್ಕೆ ಗುರಿಯಾದನು. ಶಾಪದಿಂದ ವಿಮೋಚನೆಯನ್ನು ಪಡೆಯಲು ಒಂದುವರೆ ವರ್ಷಕಾಲ ಫಲ ಪುಷ್ಪ ದೇಟಿನಲ್ಲಿ ಅವಿತುಕೊಂಡು ಶ್ರೀ ಗಣೇಶನನ್ನು ಸ್ಮರಿಸಿ ಸಂಕಷ್ಟ ಚತುರ್ಥಿ ವ್ರತವನ್ನು ಆಚರಿಸಿದನು.

ವ್ರತವು ಫಲಿಸಿದ್ದರಿಂದ ದೇವ ಗುರುಗಳಾದ ಬೃಹಸ್ಪತಿ ಬಂದು ದೇವೇಂದ್ರನನ್ನು ಮೇಲೆಬ್ಬಿಸಿದರು. ದೇವೇಂದ್ರ ಬ್ರಹ್ಮಹತ್ಯಾ ದೋಷದಿಂದ ವಿಮೋಚನೆಗೊಂಡು ಶಚೀದೇವಿಯೊಂದಿಗೆ ಸಪತ್ನಿಕನಾದ ಹಾಗೂ ದೇವಲೋಕಾಧಿಪತ್ಯವನ್ನು ಪಡೆದ.

ಲಂಕಾಧಿಪತಿಯಾದ ರಾವಣನು ಬ್ರಹ್ಮದೇವರ ವರಬಲದಿಂದ ಉನ್ಮತ್ತನಾಗಿ ಜೈತ್ರಯಾತ್ರೆಯನ್ನು ಕೈಕೊಂಡು ಹದಿನಾಲ್ಕು ಲೋಕಗಳನ್ನು ಜಯಿಸಿದನು. ಕಿಷ್ಕಿಂಧಾಪತಿಯಾದ ವಾಲಿಯನ್ನೊಮ್ಮೆ ಎದುರಿಸಿ ಜಯಿಸಿದರೆ ತನ್ನ ಸಮಾನರು ಇನ್ನಾರೂ ಇರಲಾರರೆಂದು ಕಿಷ್ಕಿಂಧೆಗೆ ಹೊರಟನು. ಆಗ ವಾಲಿ ರಾಜಧಾನಿಯಲ್ಲಿರಲಿಲ್ಲ. ಸಂಧ್ಯಾ ವಂದನೆಗಾಗಿ ದಕ್ಷಿಣ ಸಮುದ್ರಕ್ಕೆ ತೆರಳಿದ್ದನು. ಸಂಧ್ಯಾವಂದನೆಯಲ್ಲಿ ಲೀನವಾಗಿರುವ ವಾಲಿಯನ್ನು ಹಿಂದಿನಿಂದ ಹೋಗಿ ಹಿಡಿದು ಹಿಚುಕಬೇಕೆಂದು ರಾವಣನು ಲೆಕ್ಕಾಚಾರ ಹಾಕುತ್ತ ಹೊರಟನು. ತನ್ನ ಹಿಂದೆ ರಾವಣನು ಬರುತ್ತಿರುವಂತೆ ಭಾಸವಾದ ಕಪಿವೀರ ವಾಲಿ ಸರ್ರನೆ ಮುಂದಿರುಗಿ ಅವನನ್ನು ಹಿಡಿದು ಬಗಲಲ್ಲಿ ಅವಚಿಕೊಂಡು ತಟ್ಟನೆ ಕಿಷ್ಕಿಂಧೆಗೆ ಹಾರಿದನು.

ವಾಲಿಯ ಮಗನಾದ ಅಂಗದನು ಮೂರು ವರ್ಷದ ಕೂಸಾಗಿದ್ದನು. ಅವನ ತೂಗು ತೊಟ್ಟಿಲಿಗೆ ವಾಲಿಯು ರಾವಣನನ್ನು ಬಿಗಿದನು. ಹತ್ತು ಮೊಗದ ಹುಳವನ್ನು ತಂದಿದ್ದೇನೆ ಇವನನ್ನು ನೋಡುತ್ತ ನಲಿದಾಡು ಎಂದು ತೊದಲು ನುಡಿಯುತ್ತ ಮಗುವನ್ನು ಮುದ್ದಾಡಿ ಕಟ್ಟಿಲ್ಪಟ್ಟ ರಾವಣನನ್ನು ತೋರಿಸಿ ವಾಲಿಯು ರಾಜ್ಯ ಕಾರಭಾರ ನಡೆಸಲು ಹೊರಟನು. ರಾವಣ ಬಂಧನಕ್ಕೊಳಗಾಗಿ ಒದ್ದಾಡತೊಡಗಿದನು. ಪೂರ್ವಜನ್ಮದ ಸುಕೃತದ ಫಲವಾಗಿ ರಾವಣನಿಗೆ ಸಂಕಷ್ಟ ಚತುರ್ಥಿಯ ನೆನಪಾಯಿತು. ಬಂಧನದಲ್ಲಿದ್ದಾಗಲೇ ಶ್ರೀ ವಿಘ್ನೇಶ್ವರನಿಗೆ ಮಾನಸಿಕ ಪೂಜೆಯನ್ನು ಮಾಡಿ ವ್ರತವನ್ನು ನೆರವೇರಿಸಿದನು. ವ್ರತವು ಫಲಿಸಿತು. ಕೆಲದಿನಗಳ ನಂತರ ಅತ್ತ ಬಂದಿರುವ ರಾವಣನ ಕುಲಪುರೋಹಿತರು ರಾವಣನನ್ನು ಬಿಡಿಸಿ ಗಂಡಾಂತರದಿಂದ ಪಾರು ಮಾಡಿದರು.

ಕೆಲದಿನಗಳ ನಂತರ ನಡೆದ ಘಟನೆ ಇದು. ರಾಮಾಯಣದ ಖಳನಾಯಕ ರಾವಣನು ಸೀತಾದೇವಿಯನ್ನು ಲಪಟಾಯಿಸಿಕೊಂಡು ಅಶೋಕವನದಲ್ಲಿರಿಸಿದ ಅವಳನ್ನು ಒಲಿಸಿಕೊಳ್ಳಲು ಪ್ರಯತ್ನಶೀಲನಾದನು. ಇದನ್ನರಿತ ಅಯೋಧ್ಯಾಪತಿ ರಾಮನು ಶತಕೋಟಿ ವಾನರಸೇನೆಯನ್ನು ದುರುಳ ರಾವಣನೆದುರಿಗೆ ತಂದು ನಿಲ್ಲಿಸಿದನು. ಆಘಾತಗೊಂಡ ರಾವಣನು ಸಂಕಷ್ಟ ಚತುರ್ಥಿ ವ್ರತದ ಮಹಿಮೆ ಗರಿಮೆಗಳನ್ನು ಪರಿಪೂರ್ಣವಾಗಿ ಮರೆತು ಬಿಟ್ಟಿದ್ದನು. ಸಕಾಲದಲ್ಲಿ ಗಣಪತಿಯನ್ನು ಪೂಜಿಸಲಾಗದಾದನು. ರಾವಣನ ಸಂಹಾರಕ್ಕೆ ಇದು ನಾಂದಿಯಾಯಿತು.

ದಮಯಂತಿಯು ಸಂಕಷ್ಟ ಚತುರ್ಥಿಯನ್ನಾಚರಿಸಿ ಪತಿಯಾದ ನಳರಾಜನೊಡನೆ ಮಿಲನಗೊಂಡಳು. ಕಳೆದಿರುವ ಸಾಮ್ರಾಜ್ಯ ನಳ ಚಕ್ರವರ್ತಿಗೆ ಪುನಃ ದೊರೆಯಿತು. ಪಾಷಾಣವಾಗಿ ಬಿದ್ದಿರುವ ಅಹಲ್ಯೆ ಈ ವ್ರತವನ್ನು ಸ್ಮರಿಸಿ ಶಾಪವಿಮೋಚನೆ. ಸೀತಾನ್ವೇಷಣೆಗಾಗಿ ಹಾರುವ ಪೂರ್ವದಲ್ಲಿ ಗಣಪತಿಯನ್ನು ಭಜಿಸಿ ಸಾಗರವನ್ನು ದಾಟಿ ಅನ್ವೇಷಣಾ ಕಾರ್ಯದಲ್ಲಿ ವಿಜಯಶಾಲಿಯಾದನು.

## ಪೂಜಾಫಲ

ಈ ವ್ರತವನ್ನು ಜೀವಮಾನದವರೆಗೆ ಪ್ರತಿ ತಿಂಗಳು ಆಚರಿಸಬಹುದು. ಇಲ್ಲವೇ ಇಷ್ಟಾರ್ಥ ಸಿದ್ಧಿಸುವವರೆಗೆ ಆಚರಿಸುತ್ತಾರೆ.

ಶ್ರಾವಣಮಾಸ ಕೃಷ್ಣಪಕ್ಷ ಚತುರ್ಥಿಯ ದಿನ ಸ್ನಾನಾದಿಗಳನ್ನು ಮುಗಿಸಿ ನೆಲ ಸಾರಿಸಿ ರಂಗವಲ್ಲಿ ಮಂತ್ರಾಕ್ಷತೆಗಳನ್ನು ಹಾಕಿ ಮಡಿ ನೀರು ತುಂಬಿದ ಪಾತ್ರೆಯನ್ನಿಟ್ಟು ಪುಷ್ಪವಸ್ತ್ರದಿಂದ ಅದನ್ನು ಅಲಂಕರಿಸಿ ಅದರ ಮೇಲೆ ಗಣಪತಿಯ ಮೂರ್ತಿಯನ್ನಿಟ್ಟು ಪೂಜಿಸಬೇಕು. ವ್ರತಧಾರಿಯು ತನ್ನ ಯೋಗ್ಯತಾನುಸಾರ ಬಂಗಾರ, ಬೆಳ್ಳಿ, ತಾಮ್ರ ಇಲ್ಲವೆ ಮಣ್ಣಿನ ಮೂರ್ತಿಯನ್ನು ಮಾಡಿ ಪೂಜಿಸಬಹುದು. ಮೂರ್ತಿ ಪೂಜೆ ಷೋಡಶೋಪಚಾರದಿಂದ ನಡೆಸಬೇಕು.

ಚಂದ್ರೋದಯವಾದ ಬಳಿಕ ಗಣಪತಿಯನ್ನು ಪೂಜಿಸಿ, ಅರ್ಘ್ಯ ಕೊಡಬೇಕು, ಚಂದ್ರನು ಕಾಣದ ಆರು ತಾಸು ರಾತ್ರೆ ಕಳೆದ ನಂತರ ವ್ರತವನ್ನಾಚರಿಸಬೇಕು. ಅಂದು ಹಗಲು ಉಪವಾಸವಿದ್ದು ಪೂಜೆಯಾದ ನಂತರ ನೈವೇದ್ಯವನ್ನು ಸ್ವೀಕರಿಸಬೇಕು. ಬ್ರಾಹ್ಮಣರಿಗೂ ಭೋಜನ ನೀಡಿ ದಕ್ಷಿಣೆಯನ್ನು ನೀಡಬೇಕು. ಇದರಿಂದ ವ್ರತಧಾರಿಯ ಸಂಕಲ್ಪಗಳು ಈಡೇರುತ್ತವೆ.





## ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ

**ಕಪಿಲತೀರ್ಥ, ತಿರುಪತಿ.**

ತಿರುಪತಿಯ ಕಪಿಲತೀರ್ಥದಲ್ಲಿರುವ

ಶ್ರೀ ಕಪಿಲೇಶ್ವರಸ್ವಾಮಿ

ದೇವಾಲಯದಲ್ಲಿ ಆಸ್ತಿಕ

ಭಕ್ತ ಪ್ರಯೋಜನಕ್ಕಾಗಿ--

**ನಿತ್ಯಾಭಿಷೇಕ ಸೇವೆ**

--ಏರ್ಪಡಿಸಲಾಗಿದೆ. ವರ್ಷಕ್ಕೆ ೪೨ ರೂಪಾಯಿ ಶುಲ್ಕ ಅಥವಾ ಒಂದೇ ಬಾರಿಗೆ ೫೦೦ ರೂಗಳ ಇಡುಗಂಟು ಹಾಗೂ ೪೨ ರೂಗಳ ಆರಂಭವರ್ಷದ ಶುಲ್ಕವನ್ನು ನೀಡುವುದರ ಮೂಲಕ ಈ ಸೇವೆಯನ್ನು ನಡೆಸಬಹುದಾಗಿದೆ. ವರ್ಷದಲ್ಲಿ ಎರಡು ಬಾರಿ ಇಬ್ಬರು ವಯಸ್ಕರನ್ನು ಈ ಸೇವೆಯ ಸಂದರ್ಶನಕ್ಕೆ ಅನುಮತಿಸಲಾಗುವುದು.

ಭಕ್ತರು ಈ ಸೌಲಭ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

**ತಿ. ತಿ. ದೇ.**





ಕರ್ನೂಲಿನಲ್ಲಿ ಪುಸ್ತಕ ಪ್ರದರ್ಶನ ಉದ್ಘಾಟನೆ.




ವರದೇಂದ್ರರ ಆರಾಧನೆಯಲ್ಲಿ ಉಪನ್ಯಾಸ.

# ವಾರ್ತಾಲಹರಿ

## ಕರ್ನೂಲಿನಲ್ಲಿ ತಿ.ತಿ.ದೇ. ಪುಸ್ತಕ ಪ್ರದರ್ಶನ

ಕರ್ನೂಲಿನಲ್ಲಿ ತಿ. ತಿ. ದೇವಸ್ಥಾನಗಳ ಧಾರ್ಮಿಕ ಪುಸ್ತಕ ಪ್ರದರ್ಶನ ಮಾರಾಟ ವಾರೋತ್ಸವವು ಜುಲೈ 22 ರಿಂದ ನಡೆದು ಯಶಸ್ವಿಯಾಯಿತು.

ಜಿಲ್ಲಾ ವಿದ್ಯಾಧಿಕಾರಿ ಶ್ರೀ ನಾಗೇಶ್ವರರಾವ್ ಅವರು ಪುಸ್ತಕ ಪ್ರದರ್ಶನ ಮಾರಾಟವನ್ನು ಉದ್ಘಾಟಿಸುತ್ತ ಧಾರ್ಮಿಕ ಸಾಹಿತ್ಯ ಪ್ರಸಾರ ಕಾರ್ಯದಲ್ಲಿ ತಿ. ತಿ. ದೇವಸ್ಥಾನಗಳ ಅವಿರತ ಕೃಷಿಯನ್ನು ಶ್ಲಾಘಿಸುತ್ತ ರಿಯಾಯಿತಿ ದರಗಳಲ್ಲಿ ಮಾರಾಟವಾಗುವ ಪುಸ್ತಗಳನ್ನು ಜನ ಕೊಂಡು ಓದಬೇಕೆಂದು ಕರೆ ನೀಡಿದ್ದೇ ಅಲ್ಲದೆ ತಾವೇ ಪ್ರಥಮವಾಗಿ ಪುಸ್ತಕಗಳನ್ನು ಕೊಂಡು ಮಾರ್ಗದರ್ಶಕರಾದರು.

ಇಲ್ಲಿ ಹಲವಾರು ಭಾಷೆಯ ಧಾರ್ಮಿಕ ಗ್ರಂಥಗಳನ್ನು 25 ರಿಂದ 50 ಶತಾಂಶ ರಿಯಾಯಿತಿಯಲ್ಲಿ ಮಾರಲಾಯಿತು. ಜೊತೆಗೇ ತಿ. ತಿ. ದೇವಸ್ಥಾನಗಳು ತಯಾರಿಸಿದ ಅನ್ನಮಾಚಾರ್ಯ ಮತ್ತಿತರ ಹರಿದಾಸರ ಕೀರ್ತನೆಗಳ ಧ್ವನಿಸುರುಳಿಗಳು, ಶ್ರೀ ವೆಂಕಟೇಶ್ವರ ಬ್ರಹ್ಮೋತ್ಸವ, ಶ್ರೀ ವೆಂಕಟೇಶ್ವರ ಚಿನ್ನದ ಪದಕಗಳು, ಸುಂದರ ಶಾಸ್ತ್ರಾನುಸಾರಿಯಾದ ಶಿಲಾವಿಗ್ರಹಗಳನ್ನೂ ಪ್ರದರ್ಶನಕ್ಕಿಟ್ಟು ಮಾರಾಟ ಮಾಡಲಾಯಿತು.

ಒಂದು ವಾರಕಾಲ ನಡೆದ ಈ ಪುಸ್ತಕ ಪ್ರದರ್ಶನ ಮಾರಾಟದಲ್ಲಿ ಅತಿ ಹೆಚ್ಚಿನ ಜನ ಭಾಗವಹಿಸಿ ಉತ್ಸಾಹದಿಂದ ಪುಸ್ತಕಗಳನ್ನು ಕೊಳ್ಳುತ್ತಿದ್ದರೆಂದು ವರದಿಯಾಗಿದೆ.

## ಶ್ರೀ ವರದೇಂದ್ರರ ಆರಾಧನೆ

ತಿ. ತಿ. ದೇವಸ್ಥಾನಗಳ ದಾಸಸಾಹಿತ್ಯ ಪ್ರಾಜೆಕ್ಟ್ ವತಿಯಿಂದ ಲಿಂಗಸೂಗೂರಿನಲ್ಲಿ ಜೂನ್ 24, 25, 26 ರಂದು ಶ್ರೀ ವರದೇಂದ್ರರ ಆರಾಧನೆ ನಡೆದು ಯಶಸ್ವಿಯಾದವು.

ಮೂರೂ ದಿನಗಳಲ್ಲಿ ಉಪನ್ಯಾಸ, ಭಜನ ಗೋಷ್ಠಿ ಹರಿಕಥೆ, ಸಂಗೀತ ಸಭೆಗಳು ನಡೆದವು. ರಾಯಚೂರಿನ ಶ್ರೀ ಮುರಳೀಧರ ಆಚಾರ್ಯಗಲಗಲಿ, ಶ್ರೀ ಪಂಚಮುಖಿ ಪವಮಾನಾಚಾರ್ಯ (ಬೆಂಗಳೂರು) ಹಾಗೂ ಯಲಬುರ್ಗಿಯ ಶ್ರೀ

## ಧರ್ಮಕರ್ತರ ಮಂಡಳಿಯ ತೀರ್ಮಾನಗಳು

* ಆಂಧ್ರಪ್ರದೇಶ ಸರ್ಕಾರದ 1993 ನೇ ವೇತನ ಪದ್ಧತಿಯನ್ನು ತಿ.ತಿ.ದೇ. ಉದ್ಯೋಗಿಗಳಿಗೂ ಅನ್ವಯಿಸಲು ತೀರ್ಮಾನಿಸಲಾಯಿತು.
  ಶ್ರೀ ಕೆ. ವಿ. ನಟರಾಜನ್ ಅವರ ಏಕಸದಸ್ಯ ಮಂಡಳಿಯನ್ನು ತಿ.ತಿ.ದೇ. ಉದ್ಯೋಗಿಗಳ ವೇತನ ಸಮತೋಲನ, ಹುದ್ದೆಗಳ ಪುನಃಪರಿಷ್ಕರಣಕ್ಕಾಗಿ ನಿಯಮಿಸಲು ತೀರ್ಮಾನಿಸಲಾಯಿತು.

  ತಿ.ತಿ.ದೇ. ಉದ್ಯೋಗಿಗಳಿಗೆ ನೀಡುತ್ತಿರುವ ಯಾತ್ರಿಕ ಭತ್ಯೆಯನ್ನು ಕನಿಷ್ಠ 150 ರೂ. ಗರಿಷ್ಠ 300 ರೂ. ಗಳೊಳಗಿರುವಂತೆ ಮೂಲವೇತನದ ಹತ್ತು ಶತಾಂಶಕ್ಕೆ ನಿಗದಿ ಪಡಿಸಲು ತೀರ್ಮಾನಿಸಲಾಯಿತು.
* ಅರ್ಚಕರ ಸೇವಾ ನಿಯಮಾವಳಿಯನ್ನು ಅನುಮೋದಿಸಲು ತೀರ್ಮಾನಿಸಲಾಯಿತು.
* ತಿರುಪತಿಯ ವಿನಾಯಕ ನಗರ ರಾಮನಗರಗಳಲ್ಲಿ ಉದ್ಯೋಗಿಗಳ ವಸತಿಗೃಹಗಳನ್ನೂ ಕಪಿಲತೀರ್ಥ ನಗರದಲ್ಲಿ ಕಿರಿಯ ಅಧಿಕಾರಿಗಳ ವಸತಿ ಗೃಹಗಳನ್ನೂ ನಿರ್ಮಿಸಲು ತೀರ್ಮಾನಿಸಲಾಯಿತು.
* ಸಮವಸ್ತ್ರಗಳನ್ನು ಪಡೆಯುವ ಉದ್ಯೋಗಿಗಳಿಗೆ ಈ ಮೊದಲಿಗೆ ನೀಡುತ್ತಿದ್ದ 3 ಜೊತೆ ವಸ್ತ್ರಗಳಿಗೆ ಬದಲಾಗಿ 4 ಜೊತೆ ಸಮವಸ್ತ್ರಗಳನ್ನು ನೀಡಲು ತೀರ್ಮಾನಿಸಲಾಯಿತು.
* ಕೆಳಕಂಡ ವಿಖ್ಯಾತ ಪರಿಣತರನ್ನು ಗೌರವ ಸಲಹಾದಾರರನ್ನಾಗಿ ನೇಮಕ ಮಾಡಬೇಕೆಂದು ತೀರ್ಮಾನಿಸಲಾಯಿತು.

  1. ಡಾ|| ರಾಮದಾಸ್ -- ಬಾಲಾಜಿ ವಿಕಲಾಂಗರ ಪುನರಾವಾಸ ಸಂಸ್ಥೆ (ಬರ್ಡ್)
  2. ಡಾ|| ಸುಬ್ರಹ್ಮಣ್ಯಂ, ಐ.ಪಿ.ಎಸ್., --ಸಂರಕ್ಷಣೆ.
  3. ಶ್ರೀ ಕೃಪಾರಾವ್ -- ನೀರಾವರಿ.
* ಹೈದರಾಬಾದಿನಲ್ಲಿ ಉದ್ಯೋಗಿಗಳ ವಸತಿಗೃಹ ನಿರ್ಮಾಣ ಮಾಡಲು ತೀರ್ಮಾನಿಸಲಾಯಿತು.
* ತಿ. ತಿ. ದೇವಸ್ಥಾನಗಳಲ್ಲಿನ ಹಿಂದುಳಿದ ವರ್ಗ ಕುಲಗಳ ಅಭಿವೃದ್ಧಿ ಕ್ರಮಗಳಲ್ಲಿ ಸಹಕರಿಸಲು ಒಬ್ಬ ಹಿರಿಯ ಅಧಿಕಾರಿಯ ನೇಮಕಾತಿಯ ಬಗ್ಗೆ ತೀರ್ಮಾನಿಸಲಾಯಿತು.
* ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯಕ್ಕೆ ಶಾಶ್ವತ ಹಾಗೂ ಮರುವೆಚ್ಚಗಳಿಗಾಗಿ ಒಂದು ಕೋಟಿ ಹನ್ನೊಂದು ಲಕ್ಷರೂಪಾಯಿಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.
* ತಿರುಮಲೆಯಲ್ಲಿ ನೂಕಲ ವರ್ಗದವರಿಗಾಗಿ 17 ಅಂಗಡಿಗಳ ನಿರ್ಮಾಣಮಾಡಲು ತೀರ್ಮಾನಿಸಲಾಯಿತು.

* ತಿರುಮಲೆಯಲ್ಲಿ ಎರಡನೇ ಸನ್ನಿಧಿ ಬೀದಿಯ ಹಾಗೂ ಮೋರಿಗಳ ಸಾಲಿನ ಕೆಲಸದ ಪೂರೈಕೆಗಾಗಿ 42 ಲಕ್ಷ ರೂಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.

* ಚಿತ್ತೂರು ಹಯನೋತ್ಪಾದನಾ ಇಲಾಖೆಯವರಿಂದ 2 ಕೋಟಿ ರೂಪಾಯಿಗಳ ತುಪ್ಪವನ್ನು ಕೊಂಡುಕೊಳ್ಳಲು ತೀರ್ಮಾನಿಸಲಾಯಿತು.

* ಆರ್ಜಿತ ಸೇವೆಗಳಲ್ಲಿ ಹಲವು ಸೇವೆಗಳ ದರಗಳನ್ನೂ, ಹಲವು ಬಗೆಯ ಹೆಚ್ಚಿನ ಸೇವಾಶುಲ್ಕದ ವಸತಿಗಳ ಸೇವಾಶುಲ್ಕವನ್ನೂ ಏರಿಸಲು ತೀರ್ಮಾನಿಸಲಾಯಿತು.

* ಮುಚ್ಚಲಾದ ತಿ.ತಿ.ದೇ. ಸಹಕಾರಸಂಘದ ಉದ್ಯೋಗಿಗಳನ್ನು ವಯೋಮಿತಿ ರಿಯಾಯಿತಿಯೊಡನೆ ನೇರ ಅಭ್ಯರ್ಥಿಗಳಂತೆ ಪರೀಕ್ಷಾನಂತರ ಉದ್ಯೋಗಕ್ಕೆ ನೇಮಿಸಲು ತೀರ್ಮಾನಿಸಲಾಯಿತು.

* ವೇದಪಾರಾಯಣದಾರರ ಸಂಭಾವನೆಯನ್ನು ವಾರ್ಷಿಕ 12 ಲಕ್ಷ ರೂಪಾಯಿ ಹೆಚ್ಚು ವೆಚ್ಚವಾಗುವಂತೆ ಏರಿಸಲು ತೀರ್ಮಾನಿಸಲಾಯಿತು. ಇದರಿಂದಾಗಿ ವೇದಪಾರಾಯಣರರಿಗೆ 150 ರಿಂದ 400 ರೂಗಳ ವರೆಗೆ ಸಂಭಾವನೆ ಹೆಚ್ಚುವುದು.

ಜುಲೈ ತಿಂಗಳ ಧರ್ಮಕರ್ತರ ಮಂಡಳಿಯ ಸಮಾವೇಶದ ನಂತರ ನಡೆದ ಪತ್ರಿಕಾಗೋಷ್ಠಿಯಲ್ಲಿ ಈ ವಿವರಗಳನ್ನು ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ಎ. ಚೆಂಗಲ್‌ರೆಡ್ಡಿ ಅವರು ನೀಡಿದರು. ಗೋಷ್ಠಿಯಲ್ಲಿ ಶ್ರೀ ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ವಿ. ಎಲ್. ಎನ್. ಮೂರ್ತಿ ಅವರು ಹಾಜರಿದ್ದರು.

# ಶ್ರೀ ಕಣ್ವ ಮಠದ ಸ್ವಾಮೀಜಿ ನಿಧನ

ನಗರದ ಬಿ.ಇ.ಎಲ್. ಪ್ರವಚನ ಮಂದಿರದಲ್ಲಿ ಚಾತುರ್ಮಾಸ ವ್ರತ ಕೈಗೊಂಡಿದ್ದ ಶ್ರೀ ಕಣ್ವ ಮಠದ 11ನೇ ಶ್ರೀಗಳವರಾದ ಶ್ರೀ ವಿದ್ಯಾಭೂಷಣ ತೀರ್ಥ ಶ್ರೀಪಾದಂಗಳವರು 6--8--93 ರಿಂದ ಶುಕ್ರವಾರ ರಾತ್ರಿ ನಿಧನರಾದರೆಂದು ತಿಳಿಸಲು ವಿಷಾದವಾಗುತ್ತದೆ. ಅವರಿಗೆ 76 ವರ್ಷ ವಯಸ್ಸಾಗಿತ್ತು.

ಬಿಜಾಪುರ ಜಿಲ್ಲೆ ಹುಲಗರದ ಶ್ರೀಗಳ ಪೂರ್ವಾಶ್ರಮದ ಹೆಸರು ಕೆ.ಟಿ. ಜೋಶಿ, ಶ್ರೀಗಳ ದೇಹಸ್ಥಿತಿ ವಿಷಮಿಸಿದ ಪ್ರಯುಕ್ತ ಕಣ್ವ ಮಠದ ನೂತನ ಉತ್ತರಾಧಿಕಾರಿಯಾಗಿ ಶ್ರೀವಿದ್ಯಾಭಾಸ್ಕರ ತೀರ್ಥ ಶ್ರೀಪಾದಂಗಳವರನ್ನು ಆ. 4 ರಂದು ನಿಯುಕ್ತಿಗೊಳಿಸಿದ್ದರು.

ಶ್ರೀ ಶ್ರೀಗಳು ಸಂಸ್ಕೃತ ಅಧ್ಯಾಪಕರಾಗಿ ಹಿಂದೆ ಸೇವೆ ಸಲ್ಲಿಸಿದ್ದರಲ್ಲದೆ, ನ್ಯಾಯ ಮತ್ತು ಮೀಮಾಂಸ ಶಾಸ್ತ್ರಗಳಲ್ಲಿ ವಿದ್ವತ್ ಪದವಿ ಪಡೆದಿದ್ದರು. ಇವರು ಬರೆದ 'ಚಂಪೂ ಕಾವ್ಯ' '1962-66ರಲ್ಲಿ ಕಾಲೇಜ್ ಪಠ್ಯಪುಸ್ತಕವಾಗಿತ್ತು. 'ಶ್ರೀಶುಕ್ಲ ಯಜುರ್ವೇದ ನಿತ್ಯ ಆಹ್ನಿಕ ಪದ್ಧತಿಗಳು', 'ಗೀತಾಚಿಂತನ' ಇವರು ಬರೆದ ಇನ್ನೆರಡು ಗ್ರಂಥಗಳು. ಬೆಂಗಳೂರು ಸಮೀಪದ ಬಿದರ ಹಳ್ಳಿಯಲ್ಲಿ ಭೂಸಮಾಧಿ ಆಯಿತು.

ಅವರ ನೆನಪಿನಲ್ಲಿ ಸಪ್ತಗಿರಿ ವಂದಿಸುತ್ತದೆ. --ಸಂ||

ವೆಂಕೋಬಾಚಾರ್ಯರು ಉಪನ್ಯಾಸಗಳನ್ನು ನೀಡಿದರು. ಹುಬ್ಬಳ್ಳಿಯ ಶ್ರೀ ಶ್ರೀಪತಿ ಪಡಿಗಾರ ಅವರು ದಾಸರ ಕೃತಿಗಳನ್ನು ಸುಶ್ರಾವ್ಯ ಸಂಗೀತದೊಡನೆ ಮೇಳೈಸಿ ಹಾಡಿದರೆ, ಶಿವಮೊಗ್ಗ ಶ್ರೀನಿವಾಸದಾಸರು ಹರಿಕಥೆಯನ್ನು ನಡೆಸಿಕೊಟ್ಟರು. ಲಿಂಗಸೂಗೂರಿನ ಶ್ರೀ ಪ್ರಾಣೇಶದಾಸ ಭಜನಾಮಂಡಳಿಯವರು ಸಾಮೂಹಿಕ ಭಜನ ಕಾರ್ಯಕ್ರಮವನ್ನು ನಡೆಸಿಕೊಟ್ಟರು.

ತಿ. ತಿ. ದೇವಸ್ಥಾನಗಳ ಧಾರ್ಮಿಕ ಸಾಹಿತ್ಯದ ಪ್ರದರ್ಶನ ಮಾರಾಟಗಳೂ ನಡೆದವು. ದಾಸಸಾಹಿತ್ಯ ಪ್ರಾಜೆಕ್ಟ್ ಪತಿಯಿಂದ ಶ್ರೀ ಪುರುಷೋತ್ತಮ ರಾವ್, ಶ್ರೀ ಲಕ್ಷ್ಮೀನಾರಾಯಣ ಅವರುಗಳು ಭಾಗ ವಹಿಸಿದ್ದರು.

## ಶೀಘ್ರದಲ್ಲೇ ತಿರುಮಲೆಯಲ್ಲಿ ವೇದ ವಿಶ್ವವಿದ್ಯಾಲಯ

ಶ್ರೀ ವೆಂಕಟೇಶ್ವರ ಸ್ವಾಮಿಯು ನೆಲೆಸಿರುವ ತಿರುಮಲೆಯಲ್ಲಿ ಶೀಘ್ರದಲ್ಲಿಯೇ ವೇದವಿಶ್ವವಿದ್ಯಾಲಯವನ್ನು ಆರಂಭಿಸಲು ಯೋಚಿಸಲಾಗುತ್ತಿದೆ ಎಂದು ತಿ. ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರು ತಿಳಿಸಿದ್ದಾರೆ.

20 ನೇ ವೇದಶಾಸ್ತ್ರಾಗಮ ಸದಸ್ಸಿನ ಮುಖ್ಯ ಅತಿಥಿಯಾಗಿ ಭಾಗವಹಿಸಿದ ಅವರು ತಿ. ತಿ. ದೇ. ನೇತೃತ್ವದಲ್ಲಿನ ಧರ್ಮಪ್ರಚಾರ ಪರಿಷತ್‌ನ ಧರ್ಮಪ್ರಸಾರ ಕಾರ್ಯಕ್ರಮಗಳ ಬಗ್ಗೆ ಮಾತನಾಡುತ್ತ ಈ ಬಗ್ಗೆ ನುಡಿದರು. ಧರ್ಮಪ್ರಚಾರ ಕಾರ್ಯಕ್ಕೆ ಮತ್ತೂ ಹೆಚ್ಚಿನ ಧನ, ಸೌಲಭ್ಯಗಳನ್ನು ಕಲ್ಪಿಸುವ ಪ್ರಯತ್ನಗಳು ನಡೆದಿವೆಯೆಂದು ಅವರು ತಿಳಿಸುತ್ತ ವೇದ ವಿದ್ವಾಂಸರು ಭೌತಿಕ ಅವಸರಗಳಿಗಾಗಿ ಅನುಕೂಲಗಳಿಗಾಗಿ ಕಾತರರಲ್ಲವೆಂದೂ ಈ ಸಂಪ್ರದಾಯ ಇಂದಿಗೂ ನಿಜವೇ ಆದರೂ ವೇದಾಧ್ಯಯನದಲ್ಲಿ ಆಸಕ್ತಿಯಿಲ್ಲದಾಗಿದೆ ಇಂದಿನ ವಿದ್ಯಾರ್ಥಿವೃಂದದಲ್ಲಿ ಎಂದು ವಿವರಿಸಿದರು.

ಈ ಸಂದರ್ಭದಲ್ಲಿ ವೇದಪಂಡಿತರನ್ನು ಶ್ರೀ ಡಿ.ವಿ. ಎಲ್.ಎನ್. ಮೂರ್ತಿ ಅವರು ಸನ್ಮಾನಿಸಿದರು.

ಸದಸ್ಸಿನ ಅಧ್ಯಕ್ಷತೆ ವಹಿಸಿದ್ದ ಕೇಂದ್ರೀಯ ಸಂಸ್ಕೃತ ವಿಶ್ವವಿದ್ಯಾಲಯದ ಮಾಜಿ ಉಪಕುಲಪತಿಗಳು ಶ್ರೀ ರಾಮಾನುಜ ತಾತಾಚಾರ್ಯರು ಮಾತನಾಡುತ್ತ ವೇದಗಳ ಹಲವಾರು ಶಾಖಾಸಂಪ್ರದಾಯಗಳು ಕಲಿಯುವವರ ಕೊರತೆಯಿಂದಾಗಿ ಲುಪ್ತವಾ

ಗುವ ಅಪಾಯದಲ್ಲಿವೆ ಎಂದೂ ಈ ಪರಿಸ್ಥಿತಿಯನ್ನು ನಿರೋಧಿಸಿ ಎಲ್ಲ ಶಾಖಾಧ್ಯಯನವೂ ಯಶಸ್ವಿಯಾಗಿ ಪ್ರಚಾರಕ್ಕೆ ಬರುವ ಅಗತ್ಯವಿದೆಯೆಂದೂ ತಿಳಿಸುತ್ತ ವೇದಗಳ ಪ್ರಚಾರದಲ್ಲಿ ತಿ. ತಿ. ದೇವಸ್ಥಾನಗಳ ಅವಿರತ ಶ್ರದ್ಧೆಯನ್ನು ಶ್ಲಾಘಿಸಿದರು.

ತಿ. ತಿ. ದೇ. ಸಂರಕ್ಷಣಾಧಿಕಾರಿ ಶ್ರೀ ವೈ. ಎಸ್. ಎನ್. ಶರ್ಮ ಅವರು ವೇದಪಂಡಿತರಿಗಾಗಿ ಯಾವುದಾದರೊಂದು ರೀತಿಯ ಧನಕೋಶವನ್ನು ಏರ್ಪಡಿಸದೇಕೆಂದೂ, ವೇದಗಳ ವಿದ್ಯಾರ್ಥಿಗಳಿಗೆ ಧರ್ಮಪ್ರಚಾರ ಪರಿಷತ್ ಉದ್ಯೋಗಾವಕಾಶಗಳನ್ನು ಕಲ್ಪಿಸುವತ್ತ ಯೋಚಿಸದೇಕೆಂದೂ, ಈ ವಿದ್ಯಾರ್ಥಿಗಳು ಆಂಗ್ಲಭಾಷೆಯಲ್ಲೂ ಶಿಕ್ಷಣ ಪಡೆದು ಮುಂದುವರಿಯದೇಕೆಂದೂ ಸೂಚಿಸಿದರು.

---

ಗಣಪ ದೇವನೆ ಪಾದಕಮಲಕೆ
ಮಣಿದು ಬೇಡುವೆ ಮತಿಯ ನೀಡೈ
ದಣಿದು ಹೋದೆನೊ ಜಗದ ಜೊಳ್ಳಿನ
ಜೀವ ಜಾತ್ರೆಯಲಿ

ಕುಣಿಯು ತಿರುವೀ ಇಂದ್ರಿಯಂಗಳ
ಮಣಿಯ ದಿರುವೀ ಮೋಹ ಮದಗಳ
ಮಿಣಿಯ ಹಾಕುತ ಸೇದಿಕೊಳ್ಳೈ
ನಿನ್ನ ಸೇವನೆಗೆ --1--

ಹೊರಗು ಒಳಗು ವ್ಯಾಪಿಸಿರುವನೆ
ಗುರುತ ಹಿಡಿಯುತ ದೋಷ ಹರಿಪನೆ
ಗುರುವೆ ನಿನ್ನಡಿ ನಮಿಸೆ ಬಂದಿಹೆ
ಸಲಹು ಮಮತೆಯಲಿ

ಮರಣ ಮುಖವೀ ಬಾಳು ನನ್ನದು
ತಿರುಗಿ ಹುಟ್ಟುವ ಸರದಿ ಪಡೆದಿದೆ
ಕರುಣೆಯಿಂದಲಿ ನಿಲಿಸು ನೀನೀ
ಚಕ್ರತಿರುಗಣೆಯ --2--

**--ಅನಾಮಿಕ**

---

## ಸೂಚನೆ

ಸಪ್ತಗಿರಿ ಚಂದಾ ಹಣವನ್ನು ಎಂ.ಓ. ಅಥವಾ ಡಿ.ಡಿ. ಅಥವಾ ಪೋಸ್ಟಲ್ ಆರ್ಡರ್ ಮೂಲಕ ಮಾತ್ರವೇ ಕಳುಹಿಸಿ. ಇತರ ಯಾವುದೇ ರೂಪದಲ್ಲೂ ಸ್ವೀಕಾರವಾಗದು. (ನಗದು ಹಣವನ್ನು ನೀಡಿ ಅಧಿಕೃತ ರಸೀದಿ ಪಡೆಯಬಹುದು.) ಸಪ್ತಗಿರಿಗಾಗಿ ಹಣ ಕಳುಹಿಸುವಾಗ ಇತರ ಯಾವುದೇ ಬಾಬ್ತಿನ ಹಣವನ್ನೂ ಸೇರಿಸಬಾರದೆಂದು ಕೋರಲಾಗಿದೆ.

**--ಸಂಪಾದಕರು.**

---



# ಆರ್ಜಿತ ಸೇವಾಶುಲ್ಕದಲ್ಲಿ ಏರಿಕೆ

ಹೆಚ್ಚುತಿರುವ ಸರ್ವವಿಧ ವೆಚ್ಚಗಳಿಂದಾಗಿ ಹಲವು ಸೇವೆಗಳ ಶುಲ್ಕವನ್ನು ಏರಿಸಬೇಕೆಂದು ತಿ.ತಿ.ದೇ. ಧರ್ಮಕರ್ತರ ಮಂಡಳಿ ತೀರ್ಮಾನಿಸಿದೆ. ಪರಿಷ್ಕೃತವಾದ ಈ ದರಗಳು ಈಗ ಜಾರಿಯಲ್ಲಿವೆ.

| ಸೇವೆಯ ಹೆಸರು | ಹಿಂದಿನ ಶುಲ್ಕ | ಪರಿಷ್ಕೃತ ಶುಲ್ಕ |
|---|---|---|
| ಸುಪ್ರಭಾತ | ರೂ. 50=00 | ರೂ. 100=00 |
| ತೋಮಾಲಸೇವೆ | ರೂ. 100=00 | ರೂ. 200=00 |
| ಸಹಸ್ರನಾಮಾರ್ಚನೆ | ರೂ. 100=00 | ರೂ. 200=00 |
| ಏಕಾಂತಸೇವೆ | ರೂ. 50=00 | ರೂ. 100=00 |
| ಆಮಂತ್ರಣೋತ್ಸವ | ರೂ. 400=00 | ರೂ. 600=00 |
| ಪೂರಾಭಿಷೇಕ (ಶುಕ್ರವಾರಗಳಲ್ಲಿ) | ರೂ. 500=00 | ರೂ. 750=00 |
| ಪುನುಗು ಬಟ್ಟಲು | ರೂ. 200=00 | ರೂ. 300=00 |
| ಕಸ್ತೂರಿ ಬಟ್ಟಲು | ರೂ. 100=00 | ರೂ. 200=00 |
| ನಿಜಪಾದದರ್ಶನ | ರೂ. 50=00 | ರೂ. 100=00 |
| ಪ್ರತ್ಯೇಕ ಕಲ್ಯಾಣೋತ್ಸವ | ರೂ. 500=00 | ರೂ. 750=00 |

# ವಸತಿಗಳ ಶುಲ್ಕ ಏರಿಕೆ

ತಿರುಮಲೆಯಲ್ಲಿ ವಸತಿ ಸೇವಾಶುಲ್ಕವನ್ನು (ಬಾಡಿಗೆ)ಯನ್ನು ಕೆಳಕಂಡಂತೆ ಏರಿಸಲಾಗಿದೆ. ಯಾತ್ರಿಕ ಬಂಧುಗಳು ಈಗ ಜಾರಿಯಲ್ಲಿರುವ ಸೇವಾಶುಲ್ಕವನ್ನು ಗಮನಿಸಬೇಕೆಂದು ಕೋರಲಾಗಿದೆ. ಎಸ್.ಪಿ. ನಗರದಲ್ಲಿನ ವಸತಿಗಳ ಬಾಡಿಗೆ (ಸೇವಾಶುಲ್ಕ) ವನ್ನು ಎರಡರಷ್ಟಾಗಿಸಲಾಗಿದೆ.

| ವಸತಿ ವಿವರ | ಹಿಂದಿನ ಶುಲ್ಕ | ಈಗಣ ಶುಲ್ಕ |
|---|---|---|
| ಎನ್. ಜಿ. ಸಿ. | ರೂ. 100=00 | ರೂ. 200=00 |
| ಎಸ್. ವಿ. ಜಿ. ಎಚ್. | | |
| ಎನ್. ಜಿ. ಜಿ. ಎಚ್. | ರೂ. 50=00 | ರೂ. 100=00 |
| ಟಿ. ಬಿ. ಸಿ. ಒಳಗಡೆ | | |
| ವಿ. ವಿ. ಸಿ. ಮತ್ತು ಎಂ. ಬಿ. ಸಿ.ಯ | | |
| ಎಲ್ಲಡಿಲಕ್ಸ್ ಕಾಟೇಜುಗಳು | ರೂ. 70=00 | ರೂ. 150=00 |

ಯಾತ್ರಿಕರು ಆರ್ಜಿತ ಸೇವೆ ಹಾಗೂ ವಸತಿ ಶುಲ್ಕಗಳನ್ನು ಗಮನಿಸಿ ಸಹಕರಿಸಬೇಕೆಂದು ಕೋರಲಾಗಿದೆ.

**ತಿ. ತಿ. ದೇ.**

# ತಿಂಗಳಿನ ಮುಖ್ಯದಿನಗಳು

## ಅಕ್ಟೋಬರ್ --- 1993

| | |
|---|---|
| 2--10--93 ಶನಿವಾರ | ಗಾಂಧಿ ಜಯಂತಿ. |
| 11--10--93 ಸೋಮವಾರ | ಶ್ರೀ ಮಣವಾಳ ಮಹಾಮುನಿ ಉತ್ಸವ ಪ್ರಾರಂಭ. |
| 12--10--93 ಮಂಗಳವಾರ | ಕಾವೇರೀ ನದಿ ಪುಷ್ಕರ ಪ್ರಾರಂಭ. |
| 14--10--93 ಗುರುವಾರ | ಶ್ರೀ ವೇದಾಂತದೇಶಿಕರ ಉತ್ಸವ ಪ್ರಾರಂಭ. |
| 15--10--93 ಶುಕ್ರವಾರ | ತಿರುಮಲೆಯಲ್ಲಿ ನವರಾತ್ರಿ ಬ್ರಹ್ಮೋತ್ಸವಾರಂಭ. |
| 19--10--93 ಮಂಗಳವಾರ | ತಿರುಮಲೆಯಲ್ಲಿ ನವರಾತ್ರಿ ಗರುಡೋತ್ಸವ. |
| 20--10--93 ಬುಧವಾರ | ಸರಸ್ವತೀ ಪೂಜೆ. |
| | ಶ್ರೀ ಮಣವಾಳ ಮಹಾಮುನಿ ಶಾತ್ತುಮೊರೆ. |
| 22--10--93 ಶುಕ್ರವಾರ | ತಿರುಮಲೆಯಲ್ಲಿ ರಜತ ರಥೋತ್ಸವ. |
| 23--10--93 ಶನಿವಾರ | ದುರ್ಗಾಷ್ಟಮಿ, |
| | ಶ್ರೀ ವೇದಾಂತದೇಶಿಕರ ಶಾತ್ತುಮೊರೆ, |
| | ಶ್ರೀಪಿಳ್ಳೈ ಲೋಕಾಚಾರ್ಯರ ವರ್ಷತಿರುನಕ್ಷತ್ರ, |
| | ಪೊಯ್‌ಗೈ ಆಳ್ವಾರ್ ವರ್ಷತಿರುನಕ್ಷತ್ರ, |
| | ತಿರುಮಲೆಯಲ್ಲಿ ಬ್ರಹ್ಮೋತ್ಸವದ ಅವಭೃಥ. |
| 24--10--93 ಭಾನುವಾರ | ವಿಜಯದಶಮಿ, ತಿರುಮಲೆಯಲ್ಲಿ ಪಾರುವೇಟಿ ಉತ್ಸವ. |
| 25--10--93 ಸೋಮವಾರ | ಪೇಯಾಳ್ವಾರ್ ವರ್ಷತಿರುನಕ್ಷತ್ರ. |
| 30--10--93 ಶನಿವಾರ | ವಾಲ್ಮೀಕಿ ಜಯಂತಿ. |

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಅಕ್ಟೋಬರ್ 1993

**ಶರನ್ನವರಾತ್ರಿ**
--ಅ. ಚಿ. ಜೋತಿಷೀ

**ಶಕ್ತಿದೇವತೆ**
--ದಿ|| ಬ. ನ. ಗುಂಡೂರಾವ್

**ಪಂಚ ಮಹಾಯಜ್ಞ**
--ರಘುಸುತ

**ಪುರಾಣಗಳ ಕನ್ನಡನಾಡು**
--ಆರ್. ಜಿ. ಶಾನಭಾಗ

**ಅಜಾತ ಶತ್ರು**
--ಸಂತ ಶ್ರೀ ಹರಿಹರಾನಂದ ಸರಸ್ವತಿ.

**ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

ಸೂಚನೆ : ಸಪ್ತಗಿರಿ ವಾರ್ಷಿಕ ಚಂದಾ ಇಪ್ಪತ್ನಾಲ್ಕುರೂಪಾಯಿ ಮಾತ್ರ. ತಮ್ಮ ಚಂದಾ ಹಣವನ್ನು ಎಂ. ಓ. ಡಿ. ಡಿ. ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ -- ಇವರಿಗೆ ಕಳುಹಿಸಿ. ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ.




ತಿರುಮಲೆ -- ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.
2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.
3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.
4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.
5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.
6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇವಸ್ಥಾನಗಳು,**
ತಿರುಪತಿ.

Edited and published on behalf of T.T. Devasthanams by K. Subba Rao, M.A., and Printed at T.T.D. Press
by M. Vijayakumar Reddy, Manager, T.T.D. Press, Tirupati - 517 507

